ಲಲಿತ ಸಾಹಿತ್ಯ ಮಾಲೆಯ ಬಿಡಿ ಕುಡಿ ೧

# ನಾದಲೀಲೆ

ಅಂಬಿಕಾತನಯ ದತ್ತ

ಲಲಿತ ಸಾಹಿತ್ಯ ಮಾಲೆ
ಧಾರವಾಡ
೧೯೫೧

ಮೊದಲ ಮುದ್ರಣ : ೧೯೩೦
ಎರಡನೆಯ ಮುದ್ರಣ : ೧೯೪೬
ಮೂರನೆಯ ಮುದ್ರಣ : ೧೯೫೧



ಬೆಲೆ :

| ಸಾದಾ ಪ್ರತಿ | ಉತ್ತಮ ಪ್ರತಿ |
|---|---|
| ೧—೧೨—೦ | ೨—೮—೦ |

ಕಾಶಕರು:
ಗೋ. ವೆಂ. ಚುಳಕಿ
ಲಲಿತ ಸಾಹಿತ್ಯ ಮಾಲೆ
ಧಾರವಾಡ

ಮುದ್ರಕರು :
ಎಸ್. ಎಲ್. ಜೋಶಿ
ಮೋಹನ ಮುದ್ರಣಾಲಯ
ಧಾರವಾಡ

# ನಿವೇದನ

ಕವಿವರ ಶ್ರೀ ಬೇಂದ್ರೆಯವರ ಕವನ ಸಂಗ್ರಹ ಪ್ರಕಟಿಸಲು ಯಾರೂ ಹೆಮ್ಮೆ ಪಡಬೇಕು. ಇಂಥ ಒಂದು ಸಂದರ್ಭ ಹದಿನಾರು ವರುಷಕ್ಕೆ ಮೊದಲು **'ಮೂರ್ತಿ ಮತ್ತು ಕಾಮಕಸ್ತೂರಿ'** ಎಂಬುದನ್ನು ಪ್ರಕಟಿಸುವ ಮೂಲಕ ನನಗೆ ದೊರೆತಿತ್ತು. ಈಗ ಈ 'ನಾದಲೀಲೆ'ಯ ಮೂರನೆಯ ಆವೃತ್ತಿ ಪ್ರಕಟಿಸುವ ಕಾರ್ಯದಲ್ಲಿ ಒದಗಿದೆ.

ಗು. ಬೇಂದ್ರೆಯವರು ನನ್ನ ಬಿನ್ನಹವನ್ನು ಮನ್ನಿಸಿ ಇದರ ಪ್ರಕಟನೆಗಾಗಿ ತಮ್ಮ ಅನುಮತಿಯನ್ನು ನೀಡಿ ತುಂಬ ಉಪಕಾರ ಮಾಡಿದ್ದಾರೆ. ಅದಕ್ಕಾಗಿ ನಾನು ಅವರಿಗೆ ಭಕ್ತಿಪೂರ್ವಕವಾಗಿ ವಂದಿಸುತ್ತೇನೆ

ಶ್ರೀ ಬೇಂದ್ರೆಯವರ ಅನೇಕ ಕೃತಿಗಳ ಪ್ರಕಟನೆಯ ಕಾರ್ಯ ನಡೆದಿದೆ. ಅವರ ಇನ್ನೂ ಒಂದೆರಡು ಕೃತಿಗಳನ್ನು ಪ್ರಕಟಿಸುವ ಆಶೆಯಿದೆ. ಕವಿಗಳೂ, ಕನ್ನಡ ವಾಚಕರೂ ನನ್ನಿಂದ ಈ ಬಗೆಯ ಕಾರ್ಯ ಮಾಡಿಸಿಕೊಳ್ಳುವರೆಂದು ನಂಬಿದ್ದೇನೆ.

ಲಲಿತ ಸಾಹಿತ್ಯ ಮಾಲೆ
ಧಾರವಾಡ
೧-೭-೧೯೫೧

**ಗೋವಿಂದ ವೆಂಕಟೇಶ ಚುಳಕಿ**

# ಪರಿವಿಡಿ

# ಮುನ್ನುಡಿ

ಶಿವಮೊಗ್ಗೆಯ ಕರ್ಣಾಟಕ ಸಂಘದ ನನ್ನ ಮಿತ್ರರು ತಾವು ಪ್ರಕಟಿಸ
ಲಿರುವ ಶ್ರೀ ಬೇಂದ್ರೆಯವರ ಈ ಕವನ ಸಂಗ್ರಹಕ್ಕೆ ಒಂದು ಮುನ್ನುಡಿಯನ್ನು
ಬರೆಯಬೇಕೆಂದು ನನ್ನನ್ನು ಕೇಳಿದಾರೆ. ನನ್ನ ಪ್ರಿಯಮಿತ್ರರಾದ ಕವಿ ಈ
ವಿಷಯದಲ್ಲಿ ತಮ್ಮ ಸಮ್ಮತಿಯನ್ನು ತಿಳಿಸಿದಾರೆ. ಈ ಕಾರ್ಯವು ಬಹು
ಗೌರವವನ್ನು ತರತಕ್ಕದ್ದೆಂದು ನಾನು ಬಲ್ಲೆನು. ಹಾಗೆಯೇ ಅದು ಸುಖ
ವನ್ನು ತರತಕ್ಕದ್ದೂ ಆಗಿದೆ. ಆದ್ದರಿಂದ ನಾನು ಇದಕ್ಕೆ ಬಹು ಸಂತೋಷ
ದಿಂದ ಒಪ್ಪಿದ್ದೇನೆ.

ಈ ಸಂದರ್ಭದಲ್ಲಿ ಮೊದಲು ಹೇಳಬೇಕಾದ ಮಾತು ಬೇಂದ್ರೆಯವರು
ನಿಜವಾಗಿ ಕವಿ ಎನ್ನುವುದು. ಎಂದರೆ ಒಬ್ಬನ ಕೃತಿಯನ್ನು ಕಾವ್ಯವೆಂದು
ಮಾಡುವ ಗುಣಗಳಲ್ಲಿ ಮುಖ್ಯಗುಣ ಅಥವಾ ಜೀವಗುಣ ಯಾವುದೋ ಅದು
ಇವರ ಕೃತಿಯಲ್ಲಿದೆ ಎನ್ನುವುದು. ಒಂದು ಕೃತಿಯನ್ನು ಕಾವ್ಯವೆನಿಸುವ
ಲಕ್ಷಣಗಳು ಹಲವು. ಕೆಲವುವೇಳೆ ಅವು ಭಾವದ ಸೊಗಸೆಂದು, ಕೆಲವುವೇಳೆ
ಮಾತಿನ ಸೊಗಸೆಂದು, ಕೆಲವುವೇಳೆ ರೀತಿಯ ಸೊಗಸೆಂದು ಕಾಣುತ್ತದೆ—
ಕಾವ್ಯಲಕ್ಷಣಗಳೆಲ್ಲ ಈ ಮೂರು ಬಗೆಯಲ್ಲಿ ಅಡಕವಾಗುತ್ತವೆ. ಆದರೆ ಈ
ಮೂರು ಬಗೆಯ ಸೊಗಸೂ ಒಂದುಗೂಡಿ ಒಟ್ಟಾಗಿ ಕಾಣುವುದು ಕಾವ್ಯದ
ಜೀವಗುಣ ಇರುವಲ್ಲಿ ಮಾತ್ರ. ಕವಿಯ ಮನೋಧರ್ಮ ಎಷ್ಟು ತೀವ್ರವಾಗಿ
ಕಾವ್ಯಜಾತಿಯದಾದರೆ ಕಾವ್ಯ ಅಷ್ಟು ಸ್ಪಷ್ಟವಾಗಿ ಈ ಲಕ್ಷಣಗಳನ್ನು ತೋರಿಸು
ತ್ತದೆ. ಆಡುವ ಮಾತನ್ನೆಲ್ಲ ಕಾವ್ಯ ಮಾಡುವ ಮನೋಧರ್ಮ ಶ್ರೀ ಬೇಂದ್ರೆ
ಯವರಲ್ಲಿದೆ; ಅದು ಸಹಜವೂ ತೀವ್ರವೂ ಬಹುಮುಖವೂ ಆಗಿದೆ.

ನಾನು ಬೇಂದ್ರೆಯವರ ಕೃತಿ ಒಂದಕ್ಕೆ ಮನಸೋತದ್ದು ಈಗ್ಗೆ ಬಹು
ವರ್ಷದ ಹಿಂದಿನ ಮಾತು. ಆಗ್ಗೆ ನಾನು ಇವರನ್ನು ನೋಡಿರಲಿಲ್ಲ.
ಧಾರವಾಡದ "ಸ್ವಧರ್ಮ" ಪತ್ರಿಕೆಯಲ್ಲಿ ಪ್ರಕಟವಾದ ಆ ಪದ್ಯ 'ಮೂಡಲ
ಮನೆಯಾ ಮುತ್ತಿನ ನೀರಿನ ಎರಕವ ಹೊಯ್ದಾ' ಎಂದು ಆರಂಭವಾಗಿ
ಒಂದು ಉದಯವನ್ನು ವರ್ಣಿಸಿತ್ತು. ಅದರಲ್ಲಿ ಕಂಡ ಊಹೆ ವಿಲಕ್ಷಣ
ವಾಗಿತ್ತು. ಎಷ್ಟೋ ಕವಿಗಳು ಈ ಮೊದಲೇ ಮಾಡಿರುವ ವರ್ಣನೆಯಲ್ಲಿ

ಈ ಕವಿ ಒಂದು ಹೊಸ ಚಲುವನ್ನು ತಂದಿದ್ದನು. ಕೊನೆಗೆ ಇದ್ದ ಮುದ್ರಿಕೆಯಿಂದ ಕವಿಯ ಪರಿಚಯ ವ್ಯಕ್ತವಾಗಿರಲಿಲ್ಲ. ಆದರೆ ಈ ಕವಿಯ ದೃಷ್ಟಿಯೇ ಬೇರೆಯೆನ್ನುವುದು ಆ ಪದ್ಯದಲ್ಲಿ ಕಾಣುತ್ತಿತ್ತು. ಉದಯದಲ್ಲಿ ಹಕ್ಕಿಗಳು ಹಾಡುವುದನ್ನು 'ಗಿಡಗಂಟೆಯ ಕೊರಳಿನಿಂದ ಸ್ವರ ಹೊರಟಿವೆ' ಎಂದು ಇವರು ವರ್ಣಿಸಿದ್ದರು. ಹಾಡುವ ಹಕ್ಕಿ ಗಿಡಗಂಟೆಯ ಕೊರಳು ಉದಯದಲ್ಲಿ ಗಿಡ ಪಡುವ ಆನಂದವನ್ನು ಹಕ್ಕಿಯ ಹಾಡು ಹೊರಸೂಸುತ್ತದೆ. ಇಂಥ ಮಾತಿನಲ್ಲಿ ಮಿಗಿಲಾದ ಚಾತುರ್ಯ ಮಾತ್ರ ಇಲ್ಲ, ಪ್ರಕೃತಿಯನ್ನು ಕುರಿತ ವಿಲಕ್ಷಣ ಭಾವನೆಯಿದೆ. ವರ್ಣನೆಯ ಚಾತುರ್ಯವೆಂದು ಕಾಣುವ ಈ ಉಕ್ತಿಭಂಗಿ ಭಾವನೆಯ ಫಲ. ಈ ಭಾವನೆಯೇ ಬೇಂದ್ರೆಯವರ ಎಲ್ಲ ಕವಿತೆಯ ಬಲದ ಬೇರು ಇದಾದ ಕೆಲವು ವರ್ಷದ ಮೇಲೆ ಆ ಮುದ್ರಿಕೆಯ ಕವಿ ಶ್ರೀ ಬೇಂದ್ರೆಯವರು ಎಂದು ನನಗೆ ತಿಳಿಯಿತು. ಆ ತರುಣದಲ್ಲಿ ಅವರನ್ನು ಕಂಡಾಗ ನಾನು ಆ ಪದ್ಯವನ್ನು ಹೊಗಳಿ ಅವರಿಗೆ ನನ್ನ ಸಂತೋಷವನ್ನು ಸೂಚಿಸಿದೆನು ಆಮೇಲೆ ಒಂದೆರಡು ವರ್ಷದಲ್ಲಿ ಇವರನ್ನು ಬೆಳಗಾವಿಯ ಸಾಹಿತ್ಯಸಮ್ಮೇಳನದಲ್ಲಿ ಮತ್ತೆ ಕಂಡೆನು. ಆ ಸಮ್ಮೇಳನದಲ್ಲಿ ಬೇಂದ್ರೆಯವರು 'ಹಕ್ಕಿ ಹಾರುತಿದೆ ನೋಡಿದಿರಾ' ಎಂಬ ತಮ್ಮ ಕವನವನ್ನು ಓದಿದರು. ಅದನ್ನು ಕೇಳಿದ ಜನ ಎಂಥ ಆನಂದವನ್ನು ಅನುಭವಿಸಿದರೆಂದು ಈಗ ಹೇಳುವುದು ಸಾಧ್ಯವಲ್ಲ. ಆ ಕವಿತೆಯ ಎಲ್ಲ ಅರ್ಥವನ್ನೂ ಅರಿಯುವುದಕ್ಕೆ ಆ ಒಂದು ಓದು ಸಾಕಲ್ಲವೇ ಅಲ್ಲ; ಆದರೆ ಆ ಒಂದು ಓದಿನಿಂದ ಕಂಡಷ್ಟು ಕಾವ್ಯ ಗುಣದಿಂದಲೇ ಸಾವಿರ ಜನರ ಸಭೆ ಚಕಿತವಾಯಿತು. ಕಾವ್ಯ ಪ್ರಪಂಚದಲ್ಲಿ ಬಳಕೆಯುಳ್ಳವರು ಈ ಕವಿಯ ಶಕ್ತಿ ಇವನದೇ ಆದ ಹೊಸ ಒಂದು ಶಕ್ತಿ ಎಂದು ಮನಗಂಡರು. ಮಾರನೆಯ ವರ್ಷ ಮೈಸೂರಿನಲ್ಲಿ ನಡೆದ ಸಮ್ಮೇಳನಕ್ಕೆ ಬಂದ ಸಂದರ್ಭದಲ್ಲಿ ಬೇಂದ್ರೆಯವರು ಮೈಸೂರು ಬೆಂಗಳೂರು ಮತ್ತು ಮೈಸೂರಿನ ಬೇರೆ ಬೇರೆ ದೊಡ್ಡ ಊರುಗಳಲ್ಲಿ ತಮ್ಮ ಕೃತಿಗಳಿಂದ ಜನರನ್ನು ಮುಗ್ಧರನ್ನಾಗಿ ಮಾಡಿದರು. ಈಚೆಗೆ ಇವರ ಕೀರ್ತಿ ಹೇಗೆ ಬೆಳೆದಿದೆಯೆಂದು ನಾಡೆಲ್ಲ ಬಲ್ಲುದು. ಇವರ ಕೃತಿಗಳಲ್ಲಿ ಅನೇಕ ನಮ್ಮ ಜನರಿಗೆ ನಿತ್ಯದ ಬಳಕೆಯ ಕವಿತೆಗಳಾಗಿವೆ. ಈ ಕಾವ್ಯಲತೆ ಇನ್ನೂ ಬೆಳೆಯುತ್ತಿದೆ. ಇದರಿಂದ ಇನ್ನೆಷ್ಟೆಷ್ಟು ಕವಿತೆ ಬರಲೆಂದು ಅದರ ದೇವರು

ಕಲ್ಪಿಸಿರುವನೋ ಅದು ನಮಗೆ ತಿಳಿಯದು. ಆದರೆ ಈಗ ಆಗಿರುವಷ್ಟು ಕಾರ್ಯದಿಂದಲೇ ಶ್ರೀ ಬೇಂದ್ರೆಯವರು ಕನ್ನಡದ ಕಾವ್ಯಸಮುದಾಯಕ್ಕೆ ಅನೇಕ ಅತ್ಯುತ್ತಮ ಕವಿತೆಗಳನ್ನು ಸೇರಿಸಿದ್ದಾರೆ. ಹೀಗೆ ಮಾಡುವುದರಲ್ಲಿ ಇವರು ಪ್ರಪಂಚದ ಕಾವ್ಯಸಂಪತ್ತನ್ನೇ ಬೆಳೆಸಿದ್ದಾರೆ.

ಈ ಕೃತಿಗಳ ವಿಷಯವು ಬಹುವಿಧವಾದುದು. 'ಮೂಡಲ ಮನೆಯಾ ಮುತ್ತಿನ ನೀರಿನ ಎರಕಾವ ಹೊಯ್ದಾ' ಎಂಬ ರೀತಿಯ ಪ್ರಕೃತಿಯ ವರ್ಣನೆಯ ಕವಿತೆ; 'ಮುಗಿಲ ಮಾರಿಗೆ ರಾಗ ರತಿಯ ರಂಗು ಮೂಡಿತ್ತು' ಎಂಬ ರೀತಿಯ ಹೆಣ್ಣು ಗಂಡಿನ ಒಲವನ್ನು ಕುರಿತವು; 'ಮೂವತ್ತುಮೂರು ಕೋಟಿ' ಮುಂತಾದ ದೇಶಪ್ರೇಮದ ಗೀತಗಳು; 'ಚಿಂತೆ', 'ಹೊ', 'ಚಳಿಯಾಕೆ' ಈ ರೀತಿಯ ಊಹೆಯ ವಿಲಾಸದಿಂದ ಉದ್ಭವಿಸಿರುವ ಪದ್ಯಗಳು; 'ನರಬಲಿ', 'ಹೆಣದ ಹಿಂದೆ' ಮುಂತಾಗಿ ಸಮಾಜದ ಸ್ಥಿತಿಗತಿಯನ್ನು ನೋಡಿ ಕವಿಗೆ ತೋರುವ ಭಾವನೆಯನ್ನು ಕುರಿತವು; 'ಮಲ್ಲಾಡದ ಗಿಣಿ' ಮುಂತಾಗಿ ಕವಿ ತನ್ನ ಬಾಳುವೆಯನ್ನು ಕುರಿತು ಮಾಡುವ ಯೋಚನೆಗೆ ಅನ್ಯಾಪದೇಶದ ಆಕಾರವನ್ನು ಕೊಡುವ ಸಾಮತಿಗಳು; 'ಮನದನ್ನೆ' ಮುಂತಾಗಿ ಸಂಸಾರದ ಸರ್ವಸಾಮಾನ್ಯವಾದ ಅನುಭವಗಳಿಗೆ ಆಕಾರವನ್ನು ಕೊಡುವ ಗೀತಗಳು; ಒಂದು ಭಾವನೆಯನ್ನು ಹಿಡಿದು ಬಗೆಬಗೆಯಾಗಿ ಎಳೆ ಎಳೆಯುವ 'ಕುಣಿಯೋಣು ಬಾರ' ಎಂಬಂಥ ಗೀತಗಳು; 'ಹಕ್ಕಿ ಹಾರುತಿದೆ', 'ಭೃಂಗದ ಬೆನ್ನೇರಿ ಬಂತು', 'ಸಚ್ಚಿದಾನಂದ' ಮುಂತಾಗಿ ಬುದ್ಧಿಯ ಅಥವಾ ಆತ್ಮದ ಅರಿವಿಗೆ ಮಾತನ್ನು ಕೊಡುವ ಗೀತ. 'ಅವರ್ಣನೀಯ ಅರ್ವಾಚೀನ ಸೌಂದರ್ಯ', 'ಕರಿಮರಿ ನಾಯಿ' ಎಂಬಂಥ ವಿಕಲ್ಪವಾಗಿ ಬರುವ ವಿಡಂಬನ ಕಾವ್ಯಗಳು; ಹೀಗೆ ಬಹು ವಿಧವಾದ ಕೃತಿ ಇವರಲ್ಲಿ ಇವೆ. ಈ ಬಗೆಯ ಕೃತಿಯಲ್ಲಿ ಕವಿ ಅನುಸರಿಸಿರುವ ಪದ್ಧತಿ ಅನನ್ಯಸಾಧಾರಣವಾದದ್ದು. ಉದಯದ ವರ್ಣನೆಯ 'ಗಿಡಗಂಟಿಯ ಕೊರಳು' ಎಂಬ ಮಾತಿನಿಂದಲೇ ಇದನ್ನು ಉದಾಹರಿಸಬಹುದು. ಗಿಡದ ಆನಂದ, ತನ್ನ ಆನಂದ, ಗಿಡದಲ್ಲಿ ಕುಳಿತ ಹಕ್ಕಿಯ ಆನಂದ, ಬೀಸುವ ಗಾಳಿಯ ಆನಂದ ಇವು ಬೇರೆ ಬೇರೆ ಎಂದು ತಿಳಿದವನು ಅದನ್ನು ಬಿಡಿಸಿ ಬಿಡಿಸಿ ಹೇಳುತ್ತಾನೆ. ಇವುಗಳೆಲ್ಲ ಒಂದು ಆನಂದ, ನಾಲ್ಕುಕಡೆ ಕಂಡಿರತಕ್ಕದ್ದು ಎಂದು ಬುದ್ಧಿಯಿಂದ

ತಿಳಿಯುವವನು ಇದೊಂದು ವಿಚಾರ ಎಂಬಂತೆ ಹೇಳುತ್ತಾನೆ. ಇದಕ್ಕೂ ಮುಂದಿನ ಒಮ್ಮೈಯನ್ನು ಅರಿತವನು ಬೇಂದ್ರೆಯವರು ಹೇಳಿರುವಂತೆ 'ಗಿಡಗಂಟಿಯ ಕೊರಳು' ಆನಂದದಿಂದ ಹಾಡಿತು ಎನ್ನುತ್ತಾನೆ. ಬಾಳೆಲ್ಲ ಒಂದು ಎನ್ನುವದು ತಿಳಿವಿಗೆ ಮಾತ್ರ ಕಂಡಾಗ ಅಲ್ಲ, ಅನುಭವದಿಂದ ಕಂಡಾಗ ಮಾತ್ರ ಈ ಮಾತು ಪ್ರಯತ್ನವಿಲ್ಲದೆ ಬರುತ್ತದೆ. ಇದು ಬರುವ ರೀತಿಯಲ್ಲಿ ಕವಿಗೆ ತನ್ನ ಮಾತು ಎಂಥ ಸಿದ್ಧಿಯ ಮಾತು ಎಂದು ತಿಳಿದಿದೆಯೋ ಇಲ್ಲವೋ ಎನ್ನುವಂಥ ಸಹಜತೆ ಇರುತ್ತದೆ. ಒಲುಮೆಯನ್ನು ಕುರಿತ ಗೀತಗಳಲ್ಲಿ ಬೇಂದ್ರೆಯವರು ತರುವ ರಸ ಹೀಗೆಯೇ ವಿಲಕ್ಷಣವಾದುದು. ಉದಯದ ವ್ಯಾಪಾರಗಳನ್ನು ಕಣ್ಣು ತೆರೆದು, ಮನಸ್ಸು ತೆರೆದು ನೋಡಿರುವಂತೆ ಇವರು ಜನದ ಬಾಳುವೆಯಲ್ಲಿ ಪ್ರೇಮ ಹರಿಯುವ ರೀತಿಯನ್ನು ಕಣ್ಣು ತೆರೆದು ಮನಸ್ಸು ತೆರೆದು ನೋಡಿದ್ದಾರೆ. ಆದರಿಂದ ಇವರ ವಿವರಣದಲ್ಲಿ ಮಾತು ಮಾತು ನಿಜವನ್ನು ಹೇಳುತ್ತದೆ, ಮನಸ್ಸನ್ನು ಮುಟ್ಟುತ್ತದೆ, ಹೃದಯದಲ್ಲಿ ರಸದ ಊಟೆಯನ್ನು ಉಕ್ಕಿಸುತ್ತದೆ. ದೇಶಪ್ರೇಮದ ಗೀತೆಗಳಾದರೂ ಇಂಥದೇ ಒಂದು ತೀವ್ರವಾದ ಅನುಭವದಿಂದ ಬಂದಿರತಕ್ಕವು. ಹೀಗೆಯೇ ಸಮಾಜದ ಸ್ಥಿತಿಗತಿಗಳನ್ನು ಕುರಿತ ಗೀತಗಳು. ಇಲ್ಲಿಯು ತೀವ್ರ ಅನುಭವ, ವಿಪುಲಭಾವ ಕವಿತೆಯಲ್ಲಿ ಸಾಗರದ ಅಲೆಯ ಮಾಲೆಯಂತೆ ಮೇಲೆ ಮೇಲೆ ಉರುಬಿ ಬರುತ್ತದೆ. ಇದೇ ಕ್ರಮವೇ ಸಂಸಾರದ ಅನುಭವದ ಗೀತಗಳಲ್ಲಿ ಬರುತ್ತದೆ. ಇಲ್ಲಿ ಕಾಣುವುದು ದೊಡ್ಡ ಕಲ್ಲುಗಳನ್ನು ಮೇಲೆಮೇಲೆ ಹೇರಿ ಕಟ್ಟಿದ ಒಂದು ಹರ್ಮ್ಯ ಪ್ರಾಕಾರದ ಕಟ್ಟಡದ ರೀತಿ. 'ಚಿಂತೆ', ಅಥವಾ 'ಹೂ' ಗೀತಗಳಲ್ಲಿ ಇದರಿಂದ ಸ್ವಲ್ಪ ಬೇರೆಯಾದ ಕ್ರಮವೊಂದು ಕಾಣುತ್ತದೆ. ಭಾವ ಸೂಚಿಸುವ ಒಂದು ಸಾಮ್ಯ ಅಥವಾ ರೂಪಕವನ್ನು ಊಹೆ ತೆಗೆದುಕೊಂಡು ಬಳ್ಳಿಬಳ್ಳಿಯಾಗಿ ಬೆಳೆಸಿ ರಂಗವಲ್ಲಿಯ ಒಂದು ಚಿತ್ರದಂತೆ ಹರಹುತ್ತದೆ. ಇದೇ ಕ್ರಮವೇ ಪ್ರತಿಭೆಯ ಮಟ್ಟವನ್ನು ಮುಟ್ಟಿ ಬರುವ ಪದ್ಯಗಳಲ್ಲಿ ಅಂತರಾತ್ಮದ ಅತಿ ನಿಕಟ ಅನುಭವವು ಹೆಪ್ಪುಗಟ್ಟಿ ಕಣ್ಣಿಗೆ ಕಾಣುತ್ತದೆ. ಉಳಿದಲ್ಲಿ ಎರಡು ಮಾತನ್ನು ಬಿಟ್ಟರೆ ನಷ್ಟವಿಲ್ಲ, ಚಿತ್ರ ಹಾಗೂ ಚೆನ್ನಾಗಿಯೇ ಇರುತ್ತದೆ; ಇಲ್ಲಿ ಯಾವ ಮಾತನ್ನು ಬಿಟ್ಟರೆ ಭಾವವು ಮುಕ್ಕಾದೀತೋ ಎಂಬ ಭಯ ಹುಟ್ಟುತ್ತದೆ. ಈ ಕೃತಿಗಳಲ್ಲಿ

ಯಾವುದರಲ್ಲಿಯಾದರೂ ವಿಷಯ ಬಹು ಜನರು ಕಂಡದ್ದು; ವಿವರ ಕವಿಯ ಮನಸ್ಸಿಗೆ ಮಾತ್ರ ಕಂಡದ್ದು. ಅದನ್ನು ಹೇಳುವ ರೀತಿ ಇವರಲ್ಲಲ್ಲದೆ ಇನ್ನೆಲ್ಲಿಯೂ ಇರಲಾರದೆಂಬಷ್ಟು ವೈಯಕ್ತಿಕವಾಗಿದೆ. ಕವಿತೆ ಉತ್ತಮವಾಗ ಬೇಕಾದರೆ ಅದು ಬಾಳ ಆಳದಿಂದ ಬರಬೇಕು. ಹಾಗೆ ಬಂದ ಕವಿತೆ ಈ ರೀತಿ ಯಲ್ಲಿ ಕವಿಯ ಟಂಕೆಯಿಂದ ತಾನೇ ಒಂದು ಜಾತಿಯದಾಗಿ ಕಾಣುತ್ತದೆ. ಬೇಂದ್ರೆಯವರ ಕೃತಿಯಲ್ಲಿ ಅವರ ಟಂಕೆ ಸ್ಪಷ್ಟವಾಗಿ ಬಿದ್ದಿರುತ್ತದೆ.

ಇಷ್ಟು ತೀವ್ರವಾದ ರಸಾನುಭವವುಳ್ಳ ಕವಿಗೆ ವಿಚಾರಶಕ್ತಿ ಇಲ್ಲದೆ ಹೋಗಬಹುದು. ಆದರೆ ಬೇಂದ್ರೆಯವರಿಗೆ ಅನುಭವದ ತೀವ್ರತೆಗೆ ಸಮನಾಗಿ ನಿಶಿತವಾದ ವಿಚಾರಶಕ್ತಿಯಿದೆ. ಇವರು ತಮ್ಮ ಅನುಭವವನ್ನೂ ಇತರರ ಅನುಭವವನ್ನೂ ಎಳೆ ಎಳೆಯಾಗಿ ಬಿಡಿಸಬಲ್ಲರು, ತೋರಿಸಬಲ್ಲರು. ನಿಶಿತ ವಾಗಿರುವ ಈ ವಿಚಾರದ ಕ್ಷೇತ್ರವೂ ವಿಸ್ತಾರವಾಗಿದೆ. ಎಷ್ಟು ಅನುಭವಿಗಳೋ ಅಷ್ಟು ವಿಚಾರಿಗಳೂ ಆಗಿರುವುದರಿಂದ ಇವರ ಕೃತಿಯಲ್ಲಿ ರಾಗದ ಭಾಗದ ಬದಿಗೆ ಬುದ್ಧಿಯ ಭಾಗ ಸಮಸಮನಾಗಿ ನಡೆಯುತ್ತದೆ. ಎಲ್ಲಿಯೇ ಆಗಲಿ ಕವಿ ತತ್ತ್ವವನ್ನು ಬಿಟ್ಟು ಮಾತನಾಡಿದನೋ ಎಂದು ಶಂಕೆ ಬರುವುದಿಲ್ಲ.

ತಮ್ಮ ಕಾವ್ಯದ ಈ ಸಂಪತ್ತಿನಿಂದ ಕವಿ ನಮ್ಮ ಜನದ ಮನಸ್ಸನ್ನು ಸೂರೆ ಮಾಡಿದ್ದಾರೆ. ಇವರು ಪದ್ಯಗಳನ್ನೋದುವಾಗ ಕೇಳುತ್ತ ನಾನು ಅವುಗಳ ಸೊಗಸಿಗೆ ಮರುಳಾಗಿದ್ದೇನೆ. ಮರುಳು ಎಂದರೆ ಜನರು ಸರಿಯಾಗಿ ಅರ್ಥ ಮಾಡಿಕೊಳ್ಳುವರೋ ಇಲ್ಲವೋ ನನಗೆ ಸಂದೇಹ. ಆದರೆ ಆ ಸಂದರ್ಭ ದಲ್ಲಿ ನನ್ನಂತೆ ಅನೇಕರಿಗೆ ಒದಗುವ ಸ್ಥಿತಿ ಆನಂದದಿಂದ ಉಂಟಾಗುವ ಮರುಳು ಎಂದೇ ಹೇಳಬೇಕು. ಬೇಂದ್ರೆಯವರು ಬೆಳಗಾವಿಯಲ್ಲಿ 'ಹಕ್ಕಿ ಹಾರುತಿದೆ ನೋಡಿದಿರಾ' ಎಂಬ ಪದ್ಯವನ್ನು ಓದುವಾಗ ತಲೆಗೆ ಹಿಂದುಸ್ಥಾನದ ಪಗಡಿಯೊಂದನ್ನು ಸುತ್ತಿ ನಿಂತಿದ್ದರು. ಇವರ ಆಗಿನ ನಿಲುವು ನನ್ನ ಕಣ್ಣಿಗೆ ಗಾರುಡಿಗನೊಬ್ಬನ ನಿಲುವಂತೆ ಕಂಡಿತು. ಈಗಲೂ ನನಗೆ ಬೇಂದ್ರೆಯವರ ಸಹಜವಾದ ನಿಲುವು ಆ ಗಾರುಡಿಗನ ನಿಲುವೆಂದು ಕಾಣುತ್ತದೆ. ಅವರನ್ನು ಕುರಿತು ನಾನು ಬರೆದ ಒಂದು ಅಷ್ಟ ಷಟ್ಪದಿಯಲ್ಲಿ ಈ ಅಭಿಪ್ರಾಯಕ್ಕೆ ರೂಪು ಕೊಟ್ಟೆನು. ಮರುಳು ಮಾಡು, ಗಾರುಡಿಗ, ಎಂಬ ಮಾತುಗಳಲ್ಲಿ ಈಗ ನಮಗೆ ಅಲ್ಪ ಕಲ್ಪನೆಗಳು ಕಾಣುತ್ತವೆ. ಅವುಗಳ

ಮೂಲ ಅರ್ಥದಲ್ಲಿ ಶಕ್ತಿ, ಕಾಂತಿ, ಓಜಸ್ಸು ಮಾತ್ರ ಸೂಚಿತವಾಗುತ್ತದೆ. ಅಷ್ಟನ್ನು ಮಾತ್ರ ನಾನು ಇಲ್ಲಿ ಉದ್ದೇಶಿಸಿದ್ದೇನೆ. ಬೇಂದ್ರೆಯವರ ಕವಿತೆಯ ವಿಶೇಷ ಲಕ್ಷಣ ಈ ಶಕ್ತಿ, ಈ ಕಾಂತಿ, ಈ ಓಜಸ್ಸು. ಇವರ ಕವಿತೆಯನ್ನು ಅರಿಯುವ ಜನರಿಗೆ ಇದಕ್ಕೆ ಮನ ತಗ್ಗಿಸದೆ ನಿಲುಗಡೆ ಇಲ್ಲ.

ಬೇಂದ್ರೆಯವರ ಕೃತಿ ಈ ಗುಣಗಳನ್ನು ಪಡೆಯುವುದಕ್ಕೆ ಒಂದು ಹಿರಿಯ ಕಾರಣ ಅವರು ಜನದ ಬಾಳುವೆಯಲ್ಲಿ ಸೇರಿ ಬೆಳೆದಿರುವುದು. ಇವರು ಜನದ ಬಾಳನ್ನು ಚೆನ್ನಾಗಿ ನೋಡಿದ್ದಾರೆ; ಜನಪದ ಸಾಹಿತ್ಯಕ್ಕೆ ಮನಸ್ಸನ್ನು ತೆತ್ತಿದ್ದಾರೆ. ಹಲವು ಓದನ್ನು ಓದಿ ಹಲವು ಕವಿಗಳ ಕೃತಿಗಳನ್ನು ನೋಡಿ ಪ್ರಚೋದಿತವಾಗಿರುವ ಪಾಂಡಿತ್ಯದ ಕಾವ್ಯ ಒಂದು ರೀತಿ. ಇದು ಬಹು ಚೆನ್ನಾಗಿರಬಹುದು. ಆದರೆ ಜನದ ಬಾಳಿನಿಂದ, ಜನದ ನಡೆಯಿಂದ, ಜನದ ನುಡಿಯಿಂದ ಪ್ರಚೋದಿತವಾಗುವ ಕಾವ್ಯ ಅದರಿಂದ ನೂರುಮಡಿ ಹೆಚ್ಚು ಜೀವಂತವಾಗುತ್ತದೆ. ಕನ್ನಡದ ಜನತೆಯ ಕಾವ್ಯ ಎಷ್ಟು ಉತ್ತಮವಾದುದೆಂದು ಹೇಳುವುದಕ್ಕೆ ಈಗ ಹತ್ತು ವರ್ಷದಿಂದ ನಮಗೆ ತುಂಬ ಸಾಮಗ್ರಿ ದೊರೆತಿದೆ. ಈ ಸಾಹಿತ್ಯದಲ್ಲಿ ಕಾಣುವ ಭಾವದ ಊಟೆ, ಮಾತಿನ ಔಚಿತ್ಯ, ಚಿತ್ರಕರ್ಮದ ಕಲೆ ಪ್ರಪಂಚದ ಅತ್ಯುತ್ತಮ ಸಾಹಿತ್ಯದ ಮಟ್ಟವನ್ನು ಮುಟ್ಟುತ್ತದೆ. ಬೇಂದ್ರೆಯವರು ಇಷ್ಟು ಉತ್ತಮವಾದ ರೀತಿಯ ಜನಪದ ಸಾಹಿತ್ಯವನ್ನು ಪ್ರೇಮದಿಂದ ಉಪಾಸಿಸಿದ್ದಾರೆ. ಆ ಉಪಾಸನೆಯ ಕಾರಣವೂ ಜನತೆಯ ಪ್ರೇಮ; ಅದರಿಂದ ಬರುವ ಫಲವೂ ಜನತೆಯ ಪ್ರೇಮ. ಸಹಜವಾದ ಜನತೆಯ ಪ್ರೇಮ ಸಾಹಿತ್ಯದ ಪರಿಚಯದಿಂದ ಬೆಳೆದು ಸಹಜವಾದ ಕವನಶಕ್ತಿ ಇದೇ ಪರಿಚಯದಿಂದ ಮಸೆದು ಹಸನಾಗಿ, ಇವರ ಕವಿತೆಯಲ್ಲಿ ಭಾವಕ್ಕೆ ಮಾತಿನ ಅರ್ಥವನ್ನೂ ಸಿದ್ಧಿಯನ್ನೂ ತಂದಿವೆ. ಇವರ ಒಲುಮೆಯ ಗೀತಗಳಲ್ಲಿ ಕಾಣುವ ನಿಲುವು ಜನದ ಬಾಳುವೆಯ, ಜನದ ಸಾಹಿತ್ಯದ ಒಲುಮೆಯ ನಿಲುವು. ಇವರ ಅನೇಕ ಪದ್ಯಗಳಲ್ಲಿ ಕಾಣುವ ಮಾತುಗಳ ಸರಳತೆ ಜನದ ನಾಲಗೆಯ ಜನದ ಕವಿತೆಯ ಮಾತಿನಲ್ಲಿ ದೊರೆಯುವ ಸರಳತೆ. 'ಮಿಂಚಿ ಮಾಯವಾಗುತಿತ್ತು ಒಂದು ಮಂದಹಾಸ' ಎಂಬ ಕಡೆ ಪೂರ್ತಿಯನ್ನು ಬಿಟ್ಟು ಮುಖ್ಯವಾದ ಒಂದು ಅಂಶವನ್ನು ತೆಗೆದುಕೊಳ್ಳುವ ಕ್ರಮ, 'ಮೂಗಿನ ಮೂಗುತಿ ನಕ್ಕರೆ

ಕರಿಹಲ್ಲು' ಎಂದು ಹಲಸಂಗಿ ಚಕ್ಕನ್ನನನ್ನು ಹೊಗಳುವ ಪದದ ಚಾತುರ್ಯ. ಸುಳಿ ಸುಳಿಯಾಗಿ ಸುತ್ತುತ್ತ ಹೃದಯವನ್ನು ರೇಶಿಮೆಯ ದಾರದಿಂದ ಲಿಂಬಿಂತೆ ಕಟ್ಟುವ ಮರ ಮರಳಿ ಬರುವ ಪ್ರಾಸಪಙ್ಕ್ತಿಗಳ 'ಸಚ್ಚಿದಾನಂದ' ಕವಿತೆಯ ಮಾಯೆ, ಕಿನ್ನರಿ ಹಿಡಿದು ಭಾವದ ಗೀತಗಳನ್ನು ಹಾಡುವ ಜಂಗಮನ ಅಥವಾ ಹರಿದಾಸನ ಹಾಡಿನ ಒಂದು ಮಾಯೆ. ತಾನು ಪಂಡಿತನು ಎಂಬ ಕವಿ ಈ ಚಾತುರ್ಯ ಈ ಮಾಯೆಯನ್ನು ಲಕ್ಷಣಶಾಸ್ತ್ರವನ್ನನುಸರಿಸಿ ಬರೆದ ಕವಿತೆಯಲ್ಲಿ ಕಾಣುವುದಿಲ್ಲ: ಕಂಡರೂ ಅದು ಒಂದು ಮಾಯೆ, ಒಂದು ಚಾತುರ್ಯ ಎಂದು ಗುರುತಿಸುವುದಿಲ್ಲ; ಹಾಗೆ ಅದನ್ನು ಗುರುತಿಸಿದರೂ ಅದನ್ನು ತನ್ನ ಕವಿತೆಯಲ್ಲಿ ತರುವುದು ತನ್ನ ಮರ್ಯಾದೆಗೆ ಕಡಮೆ ಎಂದು ತಿಳಿಯುವನು. ಜನ್ಮತಃ ಕವಿಯಾದವನಿಗೆ ಈ ಚಾತುರ್ಯ ಈ ಮಾಯೆಯೇ ಕಾವ್ಯದ ಜೀವಾಳ, ಇದು ಎಲ್ಲಿ ಕಂಡರೂ ಒಂದೇ, ಎಂದು ತೋರುತ್ತದೆ. ಅವರ ಮೂಲ ಕಾವ್ಯದೇವತೆಯ ಚಳಕ ಹಾಸ ಎಂದು ಅವನ ಮನಸ್ಸಿಗೆ ದೃಢವಾಗಿರುತ್ತದೆ. ಅದು ತನ್ನನ್ನು ಬಳಸುವುದೇ ತನಗೆ ಗೌರವವೆಂದು ಅವನು ತಿಳಿದಿರುತ್ತಾನೆ. ದೇವರನ್ನು ಸಖನೆಂದ ಅರ್ಜುನನಂತೆ ಒಂದೊಂದು ವೇಳೆ ಅದನ್ನು ತಾನು ಬಳಸುತ್ತಾನೆ. ಪಂಡಿತನಾದರೂ ಸಹಜ ಕವಿ ಈ ಗುಣವನ್ನು ತನ್ನ ಕಾವ್ಯದಲ್ಲಿ ತರಬಹುದು. ಇದಕ್ಕೆ ಬೇಂದ್ರೆಯವರೇ ನಿದರ್ಶನ. ಅವರ ಕವಿತೆಯ ಭದ್ರತೆಗೆ ಅವರು ಜನತೆಯ ಹೃದಯವನ್ನು ಜನತೆಯ ಕವಿತೆಯನ್ನು ಅರಿತಿರುವುದೇ ಕಾರಣ.

ಈಗ ಎರಡು ವರ್ಷದ ಹಿಂದೆ ನಮ್ಮ ಮಿತ್ರರೊಬ್ಬರು ಮದರಾಸಿನ ಒಂದು ಇಂಗ್ಲೀಷು ಪತ್ರಿಕೆಯಲ್ಲಿ ಬೇಂದ್ರೆಯವರನ್ನು ಕುರಿತು ಪ್ರಕಟಿಸಿದ ಒಂದು ಲೇಖನದಲ್ಲಿ ಬೇಂದ್ರೆಯವರ ಕೃತಿ promising, ಎಂದರೆ ಮುಂದೆ ಫಲಿಸತಕ್ಕದ್ದು, ಎಂದು ಹೇಳಿದರು. Promise ಎನ್ನುವುದಕ್ಕೆ ಅರ್ಥದಲ್ಲಿ ಪ್ರತಿ fulfilment ಎಂದರೆ ಫಲಿಸಿರುವುದು ಅಥವಾ ಸಿದ್ಧಿ. ಕವಿಯ ಸಮೀಪ ಮಿತ್ರರಾದುದರಿಂದ ಆ ಲೇಖಕರು ಹೆಚ್ಚಿನ ಪ್ರಶಂಸೆ ಹೇಳುವುದು ಅನುಚಿತವಾಗಬಹುದೆಂದು ಭಯಪಟ್ಟರು. ಮಿತ್ರರಿಗೆ ಸಂಕೋಚ; ಇತರರಿಗೆ ತೋರುವುದಿಲ್ಲ. ಎಲ್ಲ ಒಳ್ಳೆಯದಕ್ಕೂ ದಾರಿದ್ರ್ಯ ಅಡಸಿರುವ ನಮ್ಮ ಈಗಿನ ಸ್ಥಿತಿಯಲ್ಲಿ ಹೀಗೆ ಒಳ್ಳೆಯ ಮಾತಿಗೂ ಸ್ವಲ್ಪ ಬರವೇ ಬಂದಿದೆ.

ಯಾರಾದರೂ ಅದನ್ನು ಹೆಚ್ಚಾಗಿ ಹೇಳಿದರೆ ಬಡತನದಲ್ಲಿ ದುಂದುಮಾಡುವವನ ವಿಷಯ ಹೇಗೆ ಬೇಸರ ಹುಟ್ಟಬಹುದೋ ಹಾಗೆ ನಮ್ಮ ಜನಕ್ಕೆ ಬೇಸರವೂ ಹುಟ್ಟುತ್ತದೆ. ಆದರೆ ಒಳ್ಳೆಯ ಮಾತು ಕೊಟ್ಟರೆ ವೆಚ್ಚವಾಗುವ ಜೋಳವಲ್ಲ ವಾಗಿಯಲ್ಲ. ಅದು ನಿಜವಾದಲ್ಲಿ ಅದನ್ನು ಹೇಳುವುದಕ್ಕೆ ಸಂಕೋಚಪಡ ಬೇಕಾದದ್ದಿಲ್ಲ ನಾನು ಸಂಕೋಚವಿಲ್ಲದೆ ಬೇಂದ್ರೆಯವರ ವಿಷಯವಾಗಿ ಇದನ್ನು ಹೇಳುತ್ತೇನೆ. ಅವರ ಕಾವ್ಯ promising ಮಾತ್ರವಲ್ಲ; ಅದರಲ್ಲಿ fulfilment ಎನ್ನುವದು ಕಂಡಿದೆ ಅಥವಾ ಇದನ್ನು ಯಾರಾ ದರೂ promising ಎಂದೇ ಹೇಳಬೇಕೆಂದು ಅಪೇಕ್ಷಿಸಿದರೆ ಈ ಕವಿತೆ ಹುಟ್ಟಿಸುವ ಆಸೆ ಸರ್ಕಾರದ ನೋಟು ಇಷ್ಟು ರೂಪಾಯಿ ಕೊಡುತ್ತೇನೆ ಎಂದು ಮಾಡುವ promise ನ ರೀತಿಯದು. ಅದು ಆಕಾರದಲ್ಲಿ "ಪ್ರಾಮಿಸ್", ನಿಜವಾಗಿ ಸಿದ್ಧಿ. ಬೇಂದ್ರೆಯವರ ಕವಿತೆ ಕಾವ್ಯ ಮಾಡಬೇಕಾದ ಕೆಲಸವನ್ನು ಮಾಡಿದೆ ಎಂದ ಮಾತ್ರಕ್ಕೆ ಇದು ಮತ್ತೇನೂ ಮಾಡಬೇಕಾದದ್ದಿಲ್ಲ ಎಂದು ಅರ್ಥವಲ್ಲ ಕಾವ್ಯ ಭೂಲೋಕದಲ್ಲಿ ನಂದನವನ. ಈ ಕವಿಯ ಬಾಳು ಅಲ್ಲಿ ಹೂ ಬಿಡಲು ತೊಡಗಿರುವ ಒಂದು ಮಂದಾರ. ಈಗಾಗಲೇ ಹೂ ಬಿಟ್ಟಿ ರುವ ಈ ತರು ಮತ್ತೆ ಮತ್ತೆ ಹೂಬಿಡುತ್ತದೆ. ಈಗ ಯಾವ ಸೊಗಸನ್ನು ನಮ್ಮ ಬಾಳಿಗೆ ಒದಗಿಸಿ ತಂದಿದೆಯೋ ಅದನ್ನು ಮತ್ತೆ ಮತ್ತೆ ತರುತ್ತಿರುತ್ತದೆ. ಕನ್ನಡದ ಜನತೆ ತಮ್ಮ ಒಂದು ವೈಶಿಷ್ಟ್ಯವನ್ನು ತೋರುವುದು ಇಂಥ ಕವಿತೆ ಯಿಂದ. ಪ್ರಪಂಚದ ಸಾಹಿತ್ಯದಲ್ಲಿ ಸ್ಥಾನವನ್ನು ಪಡೆಯಬಹುದಾದ ಕೃತಿ ಗಳು ನಮ್ಮ ಸಾಹಿತ್ಯದಲ್ಲಿ ಒದಗುವುದು ಹೀಗೆ. ಇಂಥ ಕಾವ್ಯದ ಪರಿಚಯ ಕ್ಕಾಗಿಯೇ ಬೇರೆ ದೇಶದ ಜನರು ಆಸೆಪಡುವುದು. ಬೇರೆ ನಾಡಿನ ಜನರು ಅರಿತರೆ ಅರಿಯಲಿ, ಅರಿಯದಿದ್ದರೆ ಬಿಡಲಿ. ಅವರು ಅರಿಯಬೇಕಾದ ಮಟ್ಟಕ್ಕೆ ನಮ್ಮ ಕವಿತೆ ಮುಟ್ಟಲಿ ಎನ್ನುವುದು ನಮ್ಮೆಲ್ಲರಿಗೂ ಇರುವ ಆಸೆ. ಈ ಮಟ್ಟವನ್ನು ಮುಟ್ಟಿರುವ ಕೆಲವು ಕವಿತೆಯ ಹೆಸರನ್ನು ನಾನು ಹಿಂದೆ ಒಂದು ಸಂದರ್ಭದಲ್ಲಿ ಹೇಳಿದೆನು; ಅವುಗಳಲ್ಲಿ ಒಂದು ಬೇಂದ್ರೆಯವರದು. ಆಗಲೇ ಅವರ ಕೃತಿ ಇನ್ನು ಕೆಲವನ್ನು ಆ ಗುಂಪಿನಲ್ಲಿ ಸೇರಿಸಬಹುದಾಗಿತ್ತು; ಈಗ ಮತ್ತಷ್ಟು ಕೃತಿಗಳನ್ನು ಆ ಪಙ್ಕ್ತಿಯಲ್ಲಿ ಸೇರಿಸಬಹುದು. ಇಂಥ ಕವಿತೆ ಯಿಂದ ಕನ್ನಡಕ್ಕೆ ಸೇವೆ ಮಾಡುತ್ತಿರುವ ಕವಿ ತಾನು ಧನ್ಯನು. ನಾಡನ್ನೂ

ಅವನು ಧನ್ಯನಾಗಿ ಸಾಗುತ್ತಾನೆ. ಭಾಷೆ ಇದರಿಂದ ಒಂದು ಹಿರಿಮೆಯನ್ನು ಪಡೆಯುತ್ತದೆ. ಈ ಹಿರಿಮೆಯನ್ನು ಇನ್ನೂ ಹೆಚ್ಚಿಸುತ್ತ ತಮ್ಮ ಕೀರ್ತಿಯನ್ನು ಸುತ್ತಮುತ್ತ ಹರಹುತ್ತ ಜನದ ಆನಂದವನ್ನು ಮರಳಿ ಮರಳಿ ಅರಳಿಸುತ್ತ ಶ್ರೀಮಾನ್ ಬೇಂದ್ರೆಯವರು ತಾಯ್ನುಡಿಯ ಸೇವೆಗೆ ಬಹುಕಾಲ ನಿಲ್ಲಲಿ ಎಂದು ನಾನು ನಾಡಿನ ಸೌಭಾಗ್ಯದೇವತೆಯ ಸನ್ನಿಧಿಯಲ್ಲಿ ಪ್ರಾರ್ಥನೆ ಮಾಡುತ್ತೇನೆ. ಶಿವಮೊಗ್ಗೆಯ ಕರ್ಣಾಟಕ ಸಂಘದ ಮಿತ್ರರು ಕೈಗೊಂಡಿರುವ ಪ್ರಕಟಣಾ ಕಾರ್ಯ ಶ್ಲಾಘ್ಯವಾದದ್ದು; ಅದರಲ್ಲಿ ಅವರಿಗೆ ಸಿದ್ಧಿ ದೊರೆಯುಲೆಂದೂ ನಾನು ಹಾರೈಸುತ್ತೇನೆ.

ಬೆಂಗಳೂರು,
ಚಿತ್ರಭಾನು ಸಂ|| ಶ್ರಾವಣ ಶುದ್ಧ ದ್ವಿತೀಯೆ }

ಶ್ರೀನಿವಾಸ

ಅ ರ್ಪ ಣೆ

‘ ಶ್ರೀ ’

ಅ ವ ರಿ ಗೆ

ಆ ದ ರ ಪೂ ರ್ವ ಕ ವಾ ಗಿ

ನಿನ್ನ ಪಾಡೆನಗಿರಲಿ ಆದರ ಹಾಡನ್ನಷ್ಟೆ
ನೀಡುವೆನು ರಸಿಕ! ನಿನಗೆ!

ಕಲ್ಲುಸಕ್ಕರೆಯಂಥ ನಿನ್ನೆದೆಯು ಕರಗಿದರೆ
ಆ ಸವಿಯು ಹಣಿಸು ನನಗೆ!

## ೧ ನಾದಲೀಲೆ

ಕೋಲು ಸಖೀ, ಚಂದ್ರಮುಖೀ, ಕೋಲೆ ನಾದಲೀಲೆ ॥ ಪ ॥

ಮುಂಜಾವದ ಎಲರ ಮೂಸಿ ನೋಡುತಿಹವೆ ನಲ್ಲೆ
ತರಳ ಎರಳೆ, ಚಿಗುರ ಚಿಗುರೆ, ಹೂವು ಹೂವು ಹುಲ್ಲೆ,
ಕಂಗೊಳಿಸುವ ಕೆಂಪು ಮುಂದೆ, ಕಂಗೆಡಿಸುವ ಮಂಜು ಹಿಂದೆ
ಅತ್ತಣಿಂದ ಬೇಟೆಗಾರ ಬರುವ ನಾನು ಬಲ್ಲೆ
ಮುಂಜಾವದ ಎಲರ ಮೂಸಿ ನೋಡುತಿಹವೆ ನಲ್ಲೆ
ಕೋಲು ಸಖೀ . . . .

ಬೀರುತಿರುವ ಪ್ರಾಣವಾಯು ಹೀರುತಿಹವೆ ನೀರೆ
ಕರೆವ ಕರುವು, ಕುಣಿವ ಮಣಕ, ತೊರೆವ ಗೋಗಭೀರೆ,
ಕಂಗೊಳಿಸುವ ಕೆಂಪು ಮುಂದೆ, ಕಂಗೆಡಿಸುವ ಮಂಜು ಹಿಂದೆ
ಕಾಣೆ ಕೊಳಲಿನವನ ಎನುವೆ, ಎಲ್ಲು ಇಹನು ಬಾರೆ
ಬೀರುತಿರುವ ಪ್ರಾಣವಾಯು ಹೀರುತಿಹವೆ ನೀರೆ
ಕೋಲು ಸಖೀ . . . .

ಬೆಳ್ಳಿ ಚುಕ್ಕೆ ಚಿಕ್ಕೆಯಾಗಿ ಮುಳುಗಿತಲ್ಲೆ; ಬಾಲೆ
ಮುಕುಲ, ಅಲರು, ಮಲರು, ಪಸರ ಕಂಡು ಕಣ್ಣು ನೋಲೆ
ಕಂಗೊಳಿಸುವ ಕೆಂಪು ಮುಂದೆ, ಕಂಗೆಡಿಸುವ ಮಂಜು ಹಿಂದೆ
ಕಾದಲನೆಡೆ ಬೇಡ ಬಹಳು ಕಾವಲೆ ಹೂಮಾಲೆ.
ಬೆಳ್ಳಿ ಚುಕ್ಕೆ ಚಿಕ್ಕೆಯಾಗಿ ಮುಳುಗಿತಲ್ಲೆ ಬಾಲೆ
ಕೋಲು ಸಖೀ . . . .

ಜೇಟಿಯಲ್ಲ; ಆಟವೆಲ್ಲ; ಬೇಟದ ಬಗೆ, ನಾರಿ.
ಮುಗಿಲ ಬಾಯ ಗಾಳಿಕೊಳಲ ಬೆಳಕಹಾಡ ಬೀರಿ
(ಕಂಗೊಳಿಸುವ ಕೆಂಪು ಇರಲಿ, ಕಂಗೆಡಿಸುವ ಮಂಜು ಬರಲಿ)
ಕಳೆಯಲಿಲ್ಲೆ ಕತ್ತಲಂಥ ಕತ್ತಲವೇ ಜಾರಿ.
ಜೇಟಿಯಲ್ಲ ; ಆಟವೆಲ್ಲ ; ಬೇಟದ ಬಗೆ, ನಾರಿ.

ಕೋಲು ಸಖೀ . . . .

---

# ೨. ಶುಭ ನುಡಿಯೆ ಶಕುನದ ಹಕ್ಕಿ

(ರಾಗ : ಸಾವೇರಿ–ಏಕತಾಳ)

ಶುಭ ನುಡಿಯೆ
ಶುಭ ನುಡಿಯೆ ಶಕುನದ ಹಕ್ಕಿ ।
ಶುಭ ನುಡಿಯೆ ॥ ಪ ॥

ಮುಂಗಾಳು ಕವಿಯುವಾಗ
ಹಸುಗೂಸಿಗೆ ಕಸಿವಿಸಿಯಾಗಿ
ಕಕ್ಕಾವಿಕ್ಕಿಬಡುತ ಪಾಪ
ಕಿರಿ ಕಿರಿ ಅಳುತಲಿತ್ತು
ಶುಭ ನುಡಿಯೆ
ಶುಭ ನುಡಿಯೆ ಶಕುನದ ಹಕ್ಕಿ । ಶುಭ ನುಡಿಯೆ ।

ಇರುಳು ಗಾಳಿ ಬೀಸುವಾಗ
ಹಣತಿಸೊಡರು ಹೆದರಿದಂತೆ
ತಾನು ತಣ್ಣಗಾದೇನೆಂದು
ಚಿಳಿ ಚಿಳಿ ನಡುಗುತಲಿತ್ತು
ಶುಭ ನುಡಿಯೆ
ಶುಭ ನುಡಿಯೆ ಶಕುನದ ಹಕ್ಕಿ । ಶುಭ ನುಡಿಯೆ ।

ನಿದ್ದೆಬಳಲಿ ಬಳಿಯಲಿ ಬಂದು
ಕೂಡಿದೆವೆಗಳಾಸರೆಯಲ್ಲಿ
ಮೆಲ್ಲಗೆ, ಒರಗುವ ಅದನು
ಒಂಟಿ ಸೀನು ಹಾರಿಸುತಿತ್ತು
ಶುಭ ನುಡಿಯೆ
ಶುಭ ನುಡಿಯೆ ಶಕುನದ ಹಕ್ಕಿ । ಶುಭ ನುಡಿಯೆ ।

ನಾಪಲೀಲಿ

ಕತ್ತಲೆಯ ಕೆಸರಿನ ತಳಕೆ
ಮಿನಮಿನುಗುವ ಹರಳುಗಳಂತೆ
ಚಿಕ್ಕೆ ಕೆಲವು ತೊಳಗುತಲಿರಲು
ಗಳಕನೊಂದು, ಉಳುಕುತಲಿತ್ತು
ಶುಭ ನುಡಿಯೆ
ಶುಭ ನುಡಿಯೆ ಶಕುನದ ಹಕ್ಕಿ । ಶುಭ ನುಡಿಯೆ ।

ಉಸಿರತೂಗು-ತೊಟ್ಟಿಲಲ್ಲಿ
ಜೀವ ಮೈಯು ಮರೆತಿರಲಾಗಿ
ಒಳಗಿನಾವ ಚಿಂತೆಯ ಎಸರೋ
ತಂತಾನೆ ಕನವರಿಸುತಿತ್ತು
ಶುಭ ನುಡಿಯೆ
ಶುಭ ನುಡಿಯೆ ಶಕುನದ ಹಕ್ಕಿ । ಶುಭ ನುಡಿಯೆ ।

ನಟ್ಟಿರುಳಿನ ನೆರಳಿನಲ್ಲಿ
ನೊಂದ ಜೀವ ಮಲಗಿರಲಾಗಿ
ಸವಿಗನಸನು ಕಾಣುವಾಗ
ಗೂಗೆಯೊಂದು ಘೂಕ್ಕೆನುತಿತ್ತು
ಶುಭ ನುಡಿಯೆ
ಶುಭ ನುಡಿಯೆ ಶಕುನದ ಹಕ್ಕಿ । ಶುಭ ನುಡಿಯೆ ।

ಎಚ್ಚರಾದ ಪೆಚ್ಚುಮನವು
ಹುಚ್ಚೆದ್ದು ಹರಿಯುತಿರಲು
ನಿದ್ದೆಯಿಲ್ಲ ಆಕಳಿಸಿದರೂ
ಹಲ್ಲಿಯೊಂದು ಲೊಟಗುಡುತಿತ್ತು
ಶುಭ ನುಡಿಯೆ
ಶುಭ ನುಡಿಯೆ ಶಕುನದ ಹಕ್ಕಿ । ಶುಭ ನುಡಿಯೆ ।

ಸಾಪಲೀಲೆ

ಬೆಳಗಿನ ತಂಗಾಳಿ ಬಂದು
ನಸುಕು ಮಸುಕು ಮೂಡುತಲಿರಲು
ಚಿಲೀ ಪಿಲೀ ಚಿಲಿಪಿಲಿ ಎಂದೂ
ಹಾಲಕ್ಕಿ ಉಲಿಯುತಲಿತ್ತು
ಶುಭ ನುಡಿಯೆ
ಶುಭ ನುಡಿಯೆ ಶಕುನದ ಹಕ್ಕಿ । ಶುಭ ನುಡಿಯೆ ।

ನಿನ್ನ ಸೊಲ್ಲ ನಂಬಿ ಎದ್ದೆ
ಮೈಯೆಲ್ಲ ನಡುಕವಿದ್ದು
ನೀನೆ ಶುಭ ನುಡಿಯುವಾಗ
ಏನಿದ್ದೇನು ? ಎಲ್ಲಾ ಶುಭವೇ !
ಶುಭ ನುಡಿಯೆ
ಶುಭ ನುಡಿಯೇ ಶಕುನದ ಹಕ್ಕಿ । ಶುಭ ನುಡಿಯೆ ।

---

## ೩. ಏಳುಕನ್ನಿಕೆಯರು

ನಿದ್ದೆಗಡಲಿನಲ್ಲಿ ನಾನು
ಎದ್ದೇಳುತಲಿದ್ದೆನಾಗ
ಏಳುಕನ್ನಿಕೆಯರು ಬಂದು
ಏಳು ಎಂದು ಎಂದರೋ—ಏಳು ಎಂದು ಎಂದರು

ನಿಂತೆ ನಡುವೆ ಗೊಮ್ಮಟನೊಲು,
ನಿಂತರವರು ಒರಗಿ ಸುತ್ತು
ದೀಪಮಾಲೆ ಕಂಬದಲ್ಲಿ
ದೀಪದ ಕುಡಿ ಕುಡಿಯೊಲೋ—ದೀಪದ ಕುಡಿ ಕುಡಿಯೊಲು

ಅಡಿಮುಡಿಗಳ ತುಟಿಕಟಿಗಳ
ಮಿಡಿದು ಹಿಡಿದು ನೋಡುತಿರಲು
ಮರ್ಮ ಕೆಣಕಿ ನೋಡಿದಂತೆ
ಕರ್ಮ ಕುದಿಗೆ ಬಂದಿತೋ—ಕರ್ಮ ಕುದಿಗೆ ಬಂದಿತು

ಕಲ್ಲು, ಗೊಂಬೆ, ಕೂಸುಗಳನು
ಎಲ್ಲ ನಂಬಿ, ನೆನೆದುಕೊಂಡೆ.
ತಳವು ಕಾದ ಬೆಣ್ಣೆಯಂತೆ—
ಒಳಗೆ ಪ್ರಾಣ ಕರಗಿತೋ—ಒಳಗೆ ಪ್ರಾಣ ಕರಗಿತು

ನಡುಕ ಮಿಡುಕು ತೋರಗೊಡದೆ
ಅಡಕದಿಂದ ನಿಂತೆ ತಪಕೆ;
ಗೆದ್ದೆನೇನೊ ಎನ್ನುವಂತೆ
ಇದ್ದೆನೊಮ್ಮೆ ಮನದೊಳೋ—ಇದ್ದೆನೊಮ್ಮೆ ಮನದೊಳು

ಬೊಟ್ಟು ನೀರು ಬಿಡದ ಹಾಗೆ
ಬಟ್ಟೆಯಂತೆ ಹಿಂಡುತಿರಲು
ತೊಡೆಯ ವಿಣಾಂಟೆ ಬಿಟ್ಟಳಾಗ
ಕಡೆಗೆ ಅವರೊಳೊಬ್ಬಳೋ—ಕಡೆಗೆ ಅವರೊಳೊಬ್ಬಳು

ಅಯ್ಯೊ ಎಂದು ತಿಳಿಯದಾಗಿ
ಮೈಯು ಬಾಯಿಬಿಟ್ಟಹಾಗೆ
ಬೆವರು ಬಂದ ಮೈಯ ತುಂಬ
ನವಿರುಮುಳ್ಳು ನಿಂತಿತೋ—ನವಿರುಮುಳ್ಳು ನಿಂತಿತು

ಸ್ವರಕೆ ಸ್ವರವು ಕೂಡಿಕೊಂಡು
ಹರಕೆ ಬರುತಲಿತ್ತು ಹಾಡಿ
ಡೊಳ್ಳುಬಿದ್ದ ತಂತಿಯಿಂದ
ಜೊಳ್ಳುನಾದವೆದ್ದಿತೋ—ಜೊಳ್ಳುನಾದವೆದ್ದಿತು

ಬೆಳಕಿನ ಕುಡಿ ಆರುವಂತೆ
ಚಳಕದ ಕನ್ನೆಯರು ಹಾರೆ,
ಹೇಡಿಮಣ್ಣು ಕಂಬದಂತೆ
ಗಾಡಿಯಳಿದು ಬಿದ್ದೆನೋ—ಗಾಡಿಯಳಿದು ಬಿದ್ದೆನು

ಏಳುಕನ್ನಿಕೆಯರು ಬಂದು
ಬೀಳು ಎಂದು ಎನ್ನಲಿಲ್ಲ,
ಸ್ಪರ್ಶ ಸ್ಪರ್ಶದಿಂದ ಮಾತ್ರ
ಹರ್ಷ ಹೆಪ್ಪು ಹೊಂದಿತೋ—ಹರ್ಷ ಹೆಪ್ಪು ಹೊಂದಿತು.

ರಸವು ವಿರಸವಾಯಿತಂದು
ಹೊಸ ಸಮರಸ ಕೂಡಿದಾಗ
ಏಳುಕನ್ನಿಕೆಯರೆ, ಬಂದು
ಆಳ ಮುಳುಗಿ ನೋಡಿರೇ—ಆಳ ಮುಳುಗಿ ನೋಡಿರಿ

# ೪. ನಾಲಗೆ

ಮಂದವಾಗುತ ಬರಲು ಮುಂದಿರುವ ಒಡವೆಗಳು
ಕಂದಿ ಕುಂದುತ ಬಂತು ಕಣ್ಣಬೆಳಕು
ಚಂದವೇರುತ ಬಂತು ಬೇರೊಂದು ಬಯಲಿನಲಿ
ಅಂದಕಟ್ಟಿನ ಕಟ್ಟು ಹಳಕು—ಹಳಕು—.

ಉಗೆಯಾಗಿ ಹೊಗೆಯಾಗಿ ಬೇರೆ ಬಗೆಬಗೆಯಾಗಿ
ಮುಗಿಲಮೋರೆಯ ಮತ್ತೆ ಮುಸುಕೆ ಮುಸುಕೆ
ನಗೆಯಾಗಿ ಮಿಂಚಾಗಿ, ಹಗೆಯಾಗಿ ಕೆಂಚಾಗಿ
ಬಗೆಯು ನೋಡುವದೇನೊ, ಹಿಸುಕೆ ಹಿಸುಕೆ.

ಹಕ್ಕಿಯಾಯಿತು ಜೀವ, ರೆಕ್ಕೆಯಾದವು ಭಾವ
ಹೊಕ್ಕು ಮುಗಿಲಲಿ ಹಾರಿ, ಸೊಕ್ಕಿ ಸೊಕ್ಕಿ
ನಕ್ಕು ನಲಿಯುವ ಚುಕ್ಕಿಯೆರಡ ಕಂಡೆನು ನಾನು
ಕಕ್ಕುಲತೆ ಹಿಗ್ಗಾಗಿ ಉಕ್ಕಿ ಮಿಕ್ಕಿ.

ಅಂದೆ "ಅಯ್ಯಾ, ತಂದೆ ! ಏನು ತೋರಿಸಿದಿಂದು ?
ನಿಂದಲ್ಲಿ ನಿಲ್ಲಿನ್ನು, ಬಂದೆ ಬಂದೆ
ಚೆಂದವೇ ತಂದೆಯೋ ! ಹಿಂದೆ ಸರಿಯುವರೇನು ?
ಬಂದ ಬಂದಂತಾನು ಮುಂದೆ ಮುಂದೆ.

"ಚಿತ್ರಲೋಕವು ಇಂದಖಂಡ ಕೆಂಡವು ಆಗಿ
ಹೊತ್ತುಗೊತ್ತಿನ ಚಿಕ್ಕ ಮೇರೆ ಮೀರಿ
ಬತ್ತಿ ಗೊತ್ತಿರದಂಥ ನೆಲೆಯನ್ನು ಬಲ್ಬಯಸಿ
ಹೊತ್ತ ಹತ್ತಿದೆ ಹಿಗ್ಗು ಬೇರೆ ಬೀರಿ.

"ನೈಯ ನೆಕ್ಕಲು ಬಂದ ಕುಡಿಬೆಂಕಿಯಂತಿನ್ನ
ಮೈಯಿ ನಾಲಗೆಯಾಗಿ ಚಾಚಿ—ಚಾಚಿ
ಒಯ್ಯನೊಯ್ಯನೆ ಬರುವ ಒಯ್ಯಾರವಂ ತೊರೆದು
ಅಯ್ಯ ! ಬಂದಿತು ಅಂಗಲಾಚಿ—ಆಚಿ "

# ೫. ಮಲ್ಲಾಡದ ಗಿಣಿಯೆ !

(ಮಲೆನಾಡಿನ ಗಿಣಿಯೊಂದು ಹಿಂಡನಗಲಿ,ಮಲೆನಾಡು–ಬಯಲುಸೀಮೆಗಳ ನಡುವಿನ ನಾಡಿನಲ್ಲಿ ಒಂದು ಗಿಡದ ಮೇಲೆ ಒಂಟಿಯಾಗಿ ಕುಳಿತುಕೊಂಡು, ಮುಂದೆ ಹಬ್ಬಿದ ಬಟ್ಟ ಬಯಲಿನ ದೇಶವನ್ನು 'ಬಟ್ಟಗಣ್ಣು ಬಿಟ್ಟು ಬಿಟ್ಟು' ನೋಡುತಲಿದೆ, ಅದನ್ನು ಕುರಿತು–

ಮಲ್ಲಾಡದ ಗಿಣಿಯೋ । ನೀನಿ-
ಲ್ಲಲ್ಲಾಡದ ಕುಳಿತಿ ಯಾಕ । ಏ ಗಿಣಿಯೋ ಗಿಣಿಯೋ ॥ ಪ ॥

ಪಚ್ಚೆ ಪಯರಿನ ನಾಡ । ಅಚ್ಚು
ಅಚ್ಚ ಒತ್ತಿದ ಮೈಯು ಸಿರಿಯೋ । ಏ . . . .

ಹಣ್ಣ ಮೆಲಿತು ಬಲಿತ । ನನ್ನ
ಸಣ್ಣ ಚುಂಚಿನ ಕೆಂಚ ಸೊಬಗ । ಏ . . . .

ಮರ ಮರಕೊಂದು ಮಾತ । ಕಲಿಸಿ
ಮರವಟ್ಟೇನಽ ಮಾತಿನ ಜಾಣಿ । ಏ . . . .

ತೋಟದಲ್ಲೆ ಊಟ । ನಿನ ಚೆ-
ಲ್ಲಾಟಾ ಗಾಳಿಗೋಪುರದಾಗ । ಏ . . . .

ಹಿಂಡನಗಲಿ ಬಂದೆ । ಇಲ್ಲಿ
ಕಂಡ ಕಡಿಗೆ ಬಾಯಿ ಬಿಡುವೆ । ಏ . . . .

ವಾರಿ ಗೋಣಿನ ಎಣಿಕೆ । ಏಸು
ಹಾರಿ ಹೋಗಲಿಂಬಿಲ್ಲೇನಽ । ಏ . . . .

ಬಟ್ಟಗಣ್ಣ ಬಿಟ್ಟು । ಸುತ್ತ
ಬಟ್ಟಬಯಲ ದಿಟ್ಟಿಸುವೆಷ್ಟು । ಏ . . . .

ನೆರಳಿಗೆಲ್ಲಿ ನೆರಳ ? । ಎತ್ತೂ
ಬರಿಯ ಬಿಸಿಲ, ಬಯಲಿಗೆ ಬಯಲಽ । ಏ . . .

## ನಾದಲೀಲೆ

ಮುಗಿಲ ಹೂವಿನ ಜೇನ | ನೆನಿಸಿ
ಹಗಲ ಕಳಿಯಬೇಕ ಇಲ್ಲಿ | ಏ . . . .

ಬಯಲು ತೊರಿಯ ನೀರ | ಕಂಡು
ಬಯಕಿ ತೀರಿಸಬೇಕ ಇಲ್ಲಿ | ಏ . . . .

ಹಿಂದ ತಿರುಗುವರೇನs | ಚದುರಿ
ಬಂದ ಹಾದಿಗೆ ಹೋಗುವರೇನs | ಏ . . . .

ರೆಂಬಿ ನಂಬಿಕೆ ಏಸು ? | ಇನ್ನ
ಇಂಬಿಲಿ ಮುಗಿಲ ಮನಿಯ ಹುಡುಕs | ಏ . . . .

ಹಾರಿ ಹಾರಿಧಾಂಗ | ಮುಂದ
ದಾರಿಗೆ ದಾರಿಗರಿಲ್ಲ ಇಲ್ಲಿ | ಏ . . . .

ಆಸರ ಕಾಲಿಗಿಲ್ಲ | ಹಾರಿ
ಬೇಸರವಿಲ್ಲದೆ ರೆಕ್ಕೀ ಬಡಿಯೊs | ಏ . . . .

ಆಗುಹೋಗಿಗೆ ಕಾವ | ನಿರಲು
ಕಾಗಿಗೆ ಹೆದರಿ ಕೂಡುವರೇನs | ಏ . . . .

ಬುದ್ಧೀ ನಿನ್ನದೆಷ್ಟ ? | ಮುಗಿ-
ಲುದ್ದಕು ಕಾಯುವ ಗಾಳಿಯುಂಟs | ಏ . . . .

ಹಾರಯಕೀಯ ಹರಿದು | ಇನ್ನು
ಹಾರ, ಗಿಣಿಯೆ, ನೀನs ಹಿರಿದು | ಏ . . . .

ಚಾಚಿ ಚಾಚಿ ಮೈಯ | ಮನ-
ದಾಚಿ ಸೀಮಿ ಕಂಡಾಂಗಾತs | ಏ . . . .

ತಂಗಿ, ತಂಗ ಎನುವ | ಬರುವ
ಮುಂಗೈ ಮೇಲೆ ಕೂಡಿಸಿಕೊಳುವ | ಏ . . . .

ಚೆಲುವನವನ ಮಾತ । ಕೇಳಿ
ಬಲು ಬಲು ಬ್ಯಾಗ ಅರಗಿಣಿಯಾಗಽ । ಏ .

ಎಣಿಯೆ ನಿನಗ ಗಿಣಿಯೆ । ಆ
ಗೆಣಿಯ ನಿನಗ ದೊರೆತಮ್ಯಾಲಽ । ಏ . . .

ಹಸರು ನೆಲದ ಹರಕೀ । ಹೊತ್ತ
ಕುಶಲದ ಕುವರಿ ನೀನು । ಏ . . . .

ಹುಸಿಯ ರಗಳಿಯಾಕಽ । ಇನ್ನು
ಹೊಸ ಹೊಸ ಬಾಳಿನ ಹಾಡನು ತಾರ ।
ಹಾರಽ । ಏ . . . .

ಮೂಡಣ ಕೆಂಪು ಮೂಡಿ- । ದಲ್ಲಿ
ಹೂಡ ನಿನ್ನ ಹೊಸ ಸಂಸಾರ । ಏ . . . .

---

# ೬. ನಾಯಕ

ನೆರೆಯ ಮಂದಿಯ ಮಂದಿಯಲ್ಲಿ ತಪ್ಪಿಸಿಕೊಂಡು
ನೆರೆಹೊರೆಯಲಿದ್ದಂಥ ಎರೆಯನನ್ನು
ಗುರುತಿಸುವೆ ಮೂಸಿಟ್ಟು, ಆಲಿಸುವೆ ಕಿವಿಗೊಟ್ಟು,
‘ ಕುರೊ ಕುರೋ ’ ಎಂದೆನಗೆ ಕರೆಯನೇನು ?

ಇತ್ತ ಸೆಳೆದೊಯ್ಯುವದು, ಹತ್ತಿರಕೆ ‘ ಬಾ ’ ಎಂದು
ಚಿತ್ರವನು ಬಲ್ಬಿದೆಯ ತೆರೆ ಅದೊಂದು.
ಅತ್ತಲೆಳೆದೊಯ್ಯುವದು, ಮತ್ತೆ ಇದಿರಾಗೆಂದು
ಬಿತ್ತರಿಪ ಹಮ್ಮಿನಾ ಕರೆ ಅದೊಂದು.

ಎಂಜಲದ ಕಣ್ಣಾರಿಕೆ ನೀರು ಕಡೆಯಿಸಿ ; ಎನ್ನ
ಹಿಂಜರಿಯ ಹೆಚ್ಚುವದು ಹಾದಿಯಲ್ಲಿ ;
ಪಂಜರದವೋಲಾಯ್ತು ಬಯಕೆಗಳ ಬಯಲ ಬಲೆ ;
ಸಂಜೆ ಮುಸುಕಿತ್ತು ಅರೆವೀದಿಯಲ್ಲಿ.

ಕೊರಳವಟ್ಟೆಯು ಇದ್ದು ಕರೆವವನ ನಾ ಕಾಣೆ !
ಪರದೇಶಿಯಾದೆ ನಡುವೂರಿನಲ್ಲಿ ;
ಅರೆವೀದಿಯಲ್ಲಿಯೇ ಮುಂಗಾಳು ಮುಸುಕಿತ್ತೆ
ದೊರೆಯ ಹೆಜ್ಜೆಯ ಸುಳುವು ತೋರದಿಲ್ಲಿ !

ನಿಟ್ಟಿಸುತ ಕತ್ತಲೆಯ ನಿಟ್ಟಿರುಳಿನಲ್ಲಿಯೂ
ಗಟ್ಟಿಸುತೆ ನಿನ್ನನ್ನೆ ಅತ್ತು ಕರೆವೆ
(ದಿಟ್ಟಿಸಿದೆ ದಿಕ್ಕುಗಳ ಅರೆವೀದಿಯಲ್ಲಿಯೇ)—
“ ನನ್ನ ನಾಯಕ, ನೀನು ಎಲ್ಲಿ ಇರುವೆ ? ”

## ೭. ಎದೆಯ ಒಕ್ಕಲಿಗ

ಬಿದೆಯರಿತು ಹದಮಾಡು ಹೃದಯದೀ ಹೊಲವನ್ನು
ಹದ ಬಿದೆಯನರಿತಂಥ ಹೃದಯವಾಶೀ || ಪ ||

ಗರುವ ಗ್ರಹಿಕೆಗಳೆಂಬ ಹುಲ್ಲುಕರಿಕೆಗಳಿಂದ
ಸರುವವೂ ಕೆಟ್ಟಿಹುದು ನಟ್ಟು ಬೆಳೆದು
ಬರುವ ಸುಗ್ಗಿಯ ಬೆಳೆಯು ಭರದಿಂದ ಬರುವಂತೆ
ಗುರುವೆ ! ಮಾಡೋ ! ಕಲ್ಪತರುವೆ ! ಮಾಡೋ.

ಕಾಡಿನಂದದಿ ಕರಲು, ಕಲ್ಲಿನಂದದಿ ಎದೆಯು
ಕಾಡುವದು ಕಾಣದೇ ಹಗಲು ಇರುಳೂ
ಮಾಡಿದ್ದ ಬೇಸಾಯ ಮಣ್ಣುಗೂಡುವದಯ್ಯೊ
ಮಾಡಬೇಕಿನ್ನೇನು ಕೈಸಾಗದಯ್ಯಾ.

ಕೋರಪಾಲಿನ ಮಾತು ಮಾಡಿಕೊಟ್ಟೆನು ನಿನಗೆ
ಯಾರೇಕೆ ಮಧ್ಯಸ್ಥರಿಲ್ಲಿ ಬೇಕು ?
ವಾರುಮಾಡ್ಕೈ ಹೊಟ್ಟೆಗಿಲ್ಲದೇ ಸಾಯುವೆನು
ತೋರು ಕರುಣದ ಕಸಬು ಎದೆಯ ಒಕ್ಕಲಿಗಾ.

---

# ೮. ನಿರ್ಭಯಾ !

ನಿರ್ಭಯಾ, ನಿನ್ನ ನಾಡಿಸ್ಪಂದ ಸ್ವಚ್ಛಂದ ಸ್ವಚ್ಛಂದ
ಆ ಛಂದದಲಿ ನಾನು ನಡೆವುದೆಂದೋ ! || ಪ ||

ನೀರ ಮೀನವು ನಾನು—ನೀರಿಗಂಜುವೆನೇನು ?
ನೀರ ಹೊರಗಿರಿಸಿದೆಯೊ, ಯಾವ ದಯೆಯೋ !
ನೂರು ಹೇಳುವದೇಕೆ ? ಮರಳಿ ಮನೆಯೆನಗಿರಲಿ
ನೀರನಾದರು ಕಣ್ಣ ಮರೆಗಿರಿಸೊ ಕರುಣಿ !

ಆನೆ ನೀರಾಟಕ್ಕೆ ಹಾತೊರೆವ ತೆರದಲ್ಲಿ
ನಾನೆ ನೀರಿರುವಲ್ಲಿ ಧಾವಿಸುತ ಬರುವೆ
ಏನ ಮಾಡಲಿ ಈಸಲೀಸು ಬರದೆನಗೆಂದು
ದೀನ ಬಾಲನ ಹಾಗೆ ದಂಡೆಯಲಿ ನಿಲುವೆ.

ಬಿರುಗಾಳಿ ಕಡಲಿನೊಡ ಸರಸವಾಡುವ ಹಾಗೆ
ತೆರೆಯ ಕುದುರೆಯ ಸಾಲ ತರುಬಬೇಕೆನಿಸಿ
ಮೊರೆವ ಸಾಗರಸಿಂಹ ತೆರಳುತಿರೆ ತಾ ಗವಿಗೆ
ಕೊರಳ ಕೂದಲ ಹಿಡಿಯೆ ಜೀವ ತುಡಿಯುವದು.

ಅಲೆಗಳಲಿ ನಲಿಯುವದು, ತೆರೆಗಳಲಿ ಮೊರೆಯುವದು
ಜಲಕಣದಿ ಕುಣಿಯುವದು ನನ್ನ ಮನವೆನಿಸೋ.
ನೆಲೆ ಕಾಣಬೇಕೆಂಬ ಹಂಬಲಕೆ ಇಂಬಿಟ್ಟು
ನೆಲಕೆ ಅಂಟಿಸುವದುಂಟೇನು ಅಡಿಗಳನು ?

ಉದಧಿ ಗಂಭೀರದಲಿ, ಉಸಿರಮೇಲುಸಿರಿನಲಿ
ಮದುವಣಿಗನನು ಹಸೆಗೆ ಕರೆಯುತಿಹುದು.
ಮದುವೆ ಮುದವಲ್ಲವೇ ? ಹುಸಿ ಸಾಹಸವೆ ? ಹೇಳು
ಇದುವೆ ಜೀವನವಲ್ಲೆ ಜೀವನಾಧಾರಾ?

## ೯. ಬನ್ನಿ ಬನ್ನಿ ಕನಸುಗಳೇ !

ಬನ್ನಿ ಬನ್ನಿ ಕನಸುಗಳೇ
ಮರಳಿ ಮನೆಗೆ ಬನ್ನಿ || ಪ ||

ಹಸುಳೆತನದ ನಸುನಗೆಯಲಿ
ಹುಸಿಗತೆಗಳ ಹೊಸ ಜಗದಲಿ
ಬಣ್ಣಗೊಂಡು ಬಗೆಬಗೆಯಲಿ
ಕಣ್ಣು ಚಿವುಟಿ ಕರೆದುಹೋದ
ಕನಸುಗಳೇ ಬನ್ನಿ

ಹೇ ! ಮಾತಾಡುವ ಗಿಣಿಗಳಿರಾ
ಪ್ರೀತಿಹ ಪೆಣ್ಮಣಿಗಳಿರಾ
ಜ್ಯೋತಿಯುಳ್ಳ ಕಣಿಗಳಿರಾ
ಸಾನದರಸುಕುವರರೇ
ಲೇಸಗಳಿಸಿದಮರರೇ
ಮುಚ್ಚಿಕೊಂಡ ಕನಸುಗಳೇ
ಬಿಚ್ಚಿ ಬಿಡಿಸಿ ಬನ್ನಿ.

ಹುಡುಗರ ಹುಡುಗಾಟದಲ್ಲಿ
ಬೆಡಗಿನ ಗೆಳೆಮಾಟದಲ್ಲಿ
ಬೆಳೆಸಿದ ಕೈತೋಟದಲ್ಲಿ
ಕೆಲೆದ ತುಂಬಿ ಚಿಟ್ಟೆಯಂಥ
ಕನಸುಗಳೇ ಬನ್ನಿ

ಹೇ ! ಮೀರಿದ ಬೆಳುದಿಂಗಳವೇ
ತೀರದಾಟದಂಗಳವೇ
ಕೋರಿದಂಥ ಮಂಗಳವೇ
ತಿರುಳುಗೊಂಡ ಮನಗಳೇ
ಕುರುಡುಗಳೆದ ದಿನಗಳೇ
ಜಾರಿಹೋದ ಕನಸುಗಳೇ
ಹಾರಿ ತಿರುಗಿ ಬನ್ನಿ.

## ನಾದಲೀಲೆ

ಹರೆಯುದ ತೆರೆ ತೆರೆಗಳಲ್ಲಿ
ಆರೆತೆರೆದಿಹ ಮರೆಗಳಲ್ಲಿ
ಎದೆಯ ಮುದದ ತೊಗಳಲ್ಲಿ
ಸುಧೆಯ ಕುಡಿದ ಹಕ್ಕಿ ಜಿಂಕೆ
ಕನಸುಗಳೇ ಬನ್ನಿ

ಹೇ ! ಬಳ್ಳಿವಳ್ಳಿ ಇಹ ಬಲವೇ
ತಳ್ಳಂಕವ ತೊರೆದೊಲವೇ
ಮಿಳ್ಳನೊಲಿದ ಕಡು ಚಲವೇ
ಹಾರೈಸಿದ ಬಿಡುಗಡೆ
ಏರಾಟದ ನಿಲುಕಡೆ
ಮಿಂಚಿಹೋದ ಕನಸುಗಳೇ
ಹೊಂಚು ದಾಟಿ ಬನ್ನಿ.

---

# ೧೦. ಮದ್ಯ

ಅಂದು ಅಲ್ಲಿ ದೇಗುಲದಲಿ
ನಿನ್ನ ತೀರ್ಥವಿದ್ದಿತು
ಬಂದೆನೆಂತೊ ಏನೊ, ಹಾಗೆ
ತೀರ್ಥ ಕಣ್ಗೆ ಬಿದ್ದಿತು.

ಎದೆಯ ತಳವು ತಣಿವವರೆಗು
ಹನಿ ಹನಿಯೂ ಕೂಡಿತು
ಹುದುಗಿ ಇದ್ದ ಬೀಜವೊಂದು
ತನ್ನನೆ ಹೊರದೂಡಿತು.

ಕೆಂಪು ಮಿಂಚು ಚಿಗಿತು, ಆ ತ್ರಿ-
ಶೂಲದಂತೆ ಮೂಡಿತು
ಕಂಪು ಬೀರೆ, ಗಳಿಗೆ ಮಾತ್ರ
ಕತ್ತಲೆಯೂ ಓಡಿತು.

ನನ್ನ ನಾನು ಮರೆಯುವಂತೆ
ಮದ್ಯವನ್ನು ಕುಡಿದೆನು
ತನ್ನ ತಾನು ಅರಿಯುವಂಥ
ವಿದ್ಯೆಯನ್ನು ಹಿಡಿದೆನು.

---

## ೧೧. ಚೆನ್ನ

ನನ್ನ ನಿನ್ನ ಚೆನ್ನ ಬಳಿ ವಿಶಾಲವೃಕ್ಷ ಬೆಳೆದಿದೆ.
ಮುಗಿಲ ತುಂಬಿ ಉಳಿದಿದೆ
ಗಾಳಿಯಂತೆ ಸುಳಿದಿದೆ.
ನನ್ನ ನಿನ್ನ ನೋಟ ಮಾತ್ರ ಎರಡು ದಿಕ್ಕಿಗೆಳೆದಿದೆ
ಬೇರೆ ಹಾದಿ ತುಳಿದಿದೆ.

ಕೈಗೆ ಕೈಯು ಹತ್ತಿರಿದ್ದು, ಮೈಗೆ ಮೈಯು ಹತ್ತದು
ಕಣ್ಣು ಕಣ್ಗೆ ಮುತ್ತದು
ಎವೆಗಳನ್ನು ಎತ್ತದು.
ಮನದ ಮಾತು ಮಾತ್ರ ಮನದ ವರೆಗೆ ಬರದೆ ಬತ್ತದು
ಸುಳ್ಳು ಹಾದಿ ಸುತ್ತದು.

ಕುಳಿತ ಹಾಗೆ ದೇಹವನ್ನು ಬೀಳಲುಗಳು ಬಿಗಿದಿವೆ.
ಮೈಯ್ಯ ಕೆಲಸ ಮುಗಿದಿವೆ.
ಚಿತ್ತದೂಟೆ ನೆಗೆದಿವೆ ;
ಜೀವದಾಳದಲ್ಲಿ ಮಡಗಿದಂಥ ಮುತ್ತನೊಗೆದಿವೆ.
ಮೇಲು ಹಾದಿ ಬೆಳಗಿವೆ.

ಯಾವ ಜನುಮದೊಂದು ರಾಗ ಈ ವಿರಾಗವಾಗಿದೆ ?
ಬಾಳಗೊನೆಯು ಬಾಗಿದೆ
ಕಾಯಿ ಪಾಡು ಮಾಗಿದೆ.
ಜೀವದೋಟ ನೋಟವಾಗಿ ಮುಂದೆ ಮುಂದೆ ಸಾಗಿದೆ
ಎಲ್ಲೋ ಲೀನವಾಗಿದೆ.

---

# ೧೨. ತಾಯಿ-ಕೂಸು

ಹಸುಗೂಸು ಮಲಗಿಹುದು
ಹುಸಿನಗೆಯು ತೊಲಗಿಹುದು.
ಕನಸಿನಾಚೆಗೆಯಿರುವ ನಿದ್ದೆಯಲ್ಲಿ
ತನ್ನನೂ ಮರೆತಿಹುದೊ
ತನ್ನೊಳಗೆ ಬೆರೆತಿಹುದೊ
ಹಸಿವು ಭಯ ಮುದ್ದಾಟವಿಲ್ಲ ಅಲ್ಲಿ.

ಉಸಿರ ದಾರದ ತುದಿಗೆ
ಹಾರುಹಕ್ಕಿಯ ಬದಿಗೆ
ಜೀವಪಟ ಹೆಡೆಯಾಟವಾಡುತಿಹುದು
ಮೇಲ್ಮುಗಿಲ ಗಾಳಿಯಲಿ
ತನ್ನೊಂದು ಲೀಲೆಯಲಿ
ತೀರಲದು ತಾನೆ ಇಳಿಗಿಳಿಯಲಹುದು.

ಕೆಲಸದಲಿ ಬಿಡುವಿಲ್ಲ
ಕೂಸಿನಲಿ ಮನವೆಲ್ಲ
ತಾಯಿ ಯೋಗಿನಿ ಮೈಲಿ ದುಡಿಯುತಿಹಳು
ತನ್ನೆದೆಯ ತೊಟ್ಟಿಲಲಿ
ಕಂದನನು ಇಟ್ಟಲ್ಲಿ
ಕಂಠದಲಿ ಜೋಗುಳವ ನುಡಿಸುತಿಹಳು.

ಇತ್ತ ಮರುಳಾಟದಲೊ
ಜೀವದೊಳತೋಟೆಯಲೊ
ಮುಖರಂಗಮಂಡಲದಿ ಭಾವ ಭಾವ !
ಹುಬ್ಬು ಗಂಟಿಕ್ಕುವದು ;
ಎದೆ ಏಕೊ ಬಿಕ್ಕುವದು ;
ತುಟಿಯು ನಗುವದು ; ಅದನು ಕಂಡನಾವ ?

# ೧೩. ಯಾರಿಗೂ ಹೇಳೋಣು ಬ್ಯಾಡಾ

ಯಾರಿಗೂ ಹೇಳೋಣು ಬ್ಯಾಡಾ
—ಯಾರಿಗೂ || ಪ ||

ಹಾರಗುದರೀ ಬೆನ್ನ ಏರಿ
ನ್ವಾರರಾಗಿ ಕೂತು ಹಾಂಗ s
ದೂರ ದೂರಾ ಹೋಗೋಣಂತs । ಯಾರಿಗೂ

ಹಣ್ಣು ಹೂವು ತುಂಬಿದಂಥ
ನಿನ್ನ ತೋಟ ಸೇರಿ ಒಂದ s
ತಿನ್ನೋಣಂತs ಅದರ ಹೆಸರು । ಯಾರಿಗೂ

ಕುಣಿಯೋಣಂತs ಕೂಡಿ ಕೂಡಿ
ಮಣಿಯೋಣಂತs ಜಿಗಿದು ಹಾರಿ
ದಣಿಯುದನs ಆಡೋಣಂತ । ಯಾರಿಗೂ

ಮಲ್ಲಿಗೀ ಮಂಟಪದಾಗ
ಗಲ್ಲ ಗಲ್ಲ ಹಚ್ಚಿ ಕೂತು
ಮೆಲ್ಲ ದನಿಲೆ ಹಾಡೋಣಂತ s । ಯಾರಿಗೂ

ಹಾವಿನಾ ಮರಿಯಾಗಿ ಅಲ್ಲಿ
ನಾವುನೂ ಹೆಡಿಯಾಡಿಸೋಣು
ಹೂವೆ ಹೂವು ಹಸಿರೆ ಹಸಿರು । ಯಾರಿಗೂ

ನಿದ್ದೆ ಮಾಡಿ, ಮೈಯ ಬಿಟ್ಟು,
ಮುದ್ದು ಮಾಟದ ಕನಸಿನೂರಿಗೆ
ಸದ್ದು ಮಾಡದೆ ಸಾಗೋಣಂತ s । ಯಾರಿಗೂ

# ೧೪. ನಿಗಿ ನಿಗಿ ಮುಗಿಲು

ನಿಗಿ ನಿಗಿ ಮುಗಿಲು
ನಿಗಿ ನಿಗಿ ಹಗಲು
ಕೆಂಡವ ಕಾರುವದು ;
ಮೈದೊರೆದೆತ್ತಲು
ಪ್ರಾಣವು ಬತ್ತಲು
ನೆತ್ತಿಲಿ ಹಾರುವದು ;
ಆರಿಸಿ ಬಾಯಿ
ಉದಿರಿಸಿ ಕಾಯಿ
ಬಿಸಿಯುಸಿರಿನ ಗಾಳಿ ;
ಜೀಗೆಯ ಬೀಸಿ
ಆಗಸವೀಸಿ
ಬರುತಿದೆ ಮೈತಾಳಿ.

ಕಾಲೂರಿತು ಮಳೆ,
ಕತ್ತೆತ್ತಿತು ಬೆಳೆ,
ಹನಿಯೊಡೆಯಿತು ಮೋಡ;
ಕಿಲಿ ಕಿಲಿ ಹಕ್ಕಿ
ಕುಲು ಕುಲು ಸಕ್ಕಿ !
ದಯೆಗರೆಯಿತು ನೋಡಾ !

## ೧೫. ಪಾರಿಜಾತ

ಸಂಜೆಗೆಂಪು ಮೊದಲು ಹಿಂದೆ
ಬೆಳುದಿಂಗಳು ಅದರ ಮುಂದೆ
ವರ್ಣಕ್ರಮ ಕಾಣಲಮುಷು
ಇದನು ಬ್ರಹ್ಮ ಬರೆದನೊ !

ತುಂಬು ಹಳದಿ ಕೆಂಪು ನಸುಕೊ
ಹೂವದು ಮುಂಜಾವ ಮಸುಕೊ
ಎನಿತು ಸಣ್ಣ ಏನು ಬಣ್ಣ
ನನ್ನ ಕಣ್ಣ ಕರೆಸಿತು.

ಹೊಳೆವ ಹುರುಳ ಹಾಡಿನಂತೆ
ಹೆಣ್ಣಿನ ಕಳ ವಾಡಿನಂತೆ—
ಈ ಸುವಾಸ, ಮಂದಹಾಸ
ದಿನದಾಯುಸ ಕಳೆವುದು.

ಮೂಗಿಗಿದರ ಕಂಪು ಬರದು
ಮೈಗೆ ಇದರ ತಂಪು ಅರಿದು
ಸುರರ ಬನದ ಹೂವುತನದ
ತಿಳಲು, ಮನದ ಅರಿವಿದು.

ಸತಿ ರುಕ್ಮಿಣಿ ಪ್ರೇಮರಮಣ
ಅವಳ ಪೂಜೆಗಿದೆ ಸುಮಮಣಿ
ಕಾಮಭಾವ ತೊಳೆದು ದೇವ
ಈ ಹೂವ ತರಿಸಿದ.

ಸತ್ಯಭಾಮೆ ಕುನಿಸಿನವಳು,
ಕೃಷ್ಣ, ರಸಿಕ, ಹುಡುಗೆಯಿವಳು
ಇದನು ಒಂದು ಮೇಲು ಎಂದು
ಭಜಿಸಲೆಂದು ಇರಿಸಿದ.

## ನಾವರೀತಿ

ಮಣ್ಣಿ ನೆಲದ ಹೂವೆ ಅಲ್ಲ
ಗರ್ವ ದರ್ಪ ಇದಕೆ ಇಲ್ಲ;
ತೊರೆದಾದಿನ ನಂದನವನ
ಭೂ ಬಂಧನ ಪಡೆಯಿತು.

ಗಿಡವು ಬರಲು ಇಳೆಗೆ ಇಳಿದು
ಭುವಿಗೆ ಸರಿ ವಿಕಾರ ತಳೆದು
ಸುಮವು ಮಾತ್ರ ಮಧುರಗಾತ್ರ
ಪ್ರೀತಿ ಪಾತ್ರವುಳಿದಿತು.

ಎಲೆಯು ಗಿಡವು ತೀರ ರುಕ್ಷ
ಹೆಸರು ಹಿರಿದು ಕಲ್ಪವೃಕ್ಷ
ಹೂವಿನಿಂದ ಹೆಸರು ಬಂದ
ಇದರ ಚಂದ ಹೊಸತಿದು.

ಚಿಕ್ಕೆಯೊಡನೆ ಮೂಡು ಮುಳುಗು;
ಆಗದದಕೆ ಹಗಲ ಬೆಳಗು;
ಜ್ಞಾನಿಯು ಗತಿ ಇರುಳೊಳಗತಿ
ನಿಜ ಜಾಗೃತಿ ಇರುವದು.

ಬಲು ಮಿದು ಅತಿ ನಯದ ತನುವು
ಮುಟ್ಟೆದೊಡನೆ ಕೆಟ್ಟಿನೆನುವು-
ದಿದು ಸತಿ ಭಯ, ಮಡದಿಯ ನಯ
ಅಂಥ ಹೃದಯವರಳಿತು.

ಪಾರಿಜಾತ ಹುಟ್ಟಿಸಿದನ
ಎದೆಯ ಹದವು, ಮನದ ಹದನ
ಏನು ಮಾಟ, ಎಂಥ ಆಟ !
ಇದರ ಕೂಟ ತಿಳಿಯದು.

# ೧೬. ಶ್ರಾವಣ

ಅಗೋ ಅಲ್ಲಿ ದೂರದಲ್ಲಿ
ನೆಲದ ಮುಗಿಲ ಮಗ್ಗುಲಲ್ಲಿ
ಹಸಿರಿನ ಹಸುಗೂಸದೊಂದು
ಆಗ ಈಗ ಹೊರಳುತಿಹುದು
ಏನೊ ಎಂತೊ ಒರಲುತಿಹುದು
ಆಃ ಹಸಿರ ಒಳಗೆ ಹೊರಗೆ
ನೀರ ಬೆಳಕ ತುಣುಕು ಮಿಣುಕು,
ಅಲ್ಲಿನಿಂದ ಬಂದೆಯಾ !
ಕುಣಿವ ಮಣಿವ ಹೆಡೆಯ ಹಾವುಗಳನು ಹಿಡಿದು ತಂದೆಯಾ ?
ಏಕೆ ಬಂದೆ ? ಏನು ತಂದೆ ?
ಹೇಳೊ ಹೇಳು ಶ್ರಾವಣಾ
ನೀನು ಬಂದ ಕಾರಣಾ.
ಪಡುವ ದಿಕ್ಕಿನಿಂದ ಹರಿವ
ಗಾಳಿ-ಕುದುರೆಯನ್ನು ಏರಿ
ಪರ್ಜನ್ಯ ಗೀತವನ್ನು
ಹಾಃಡುತ್ತ ಬಂದಿತು.
ಬನದ ಮರದ ಮೇಳವೆಲ್ಲ
ಸೋಃ ಎಂದು ಎಂದಿತು.
ಬಿದಿರ ಕೊಳಲ ನುಡಿಸಿತು
ಮಲೆಯ ಹೆಳಲ ಮುಡಿಸಿತು ;
ಬಳ್ಳಿಮಾಡ ಬಾಗಿಸಿತ್ತು
ಗಿಡಗಳ ತಲೆದೂಗಿಸಿತ್ತು ;
ಮರದ ಹನಿಯ ಮಣಿಗಳನ್ನು
ಅತ್ತ ಇತ್ತ ತೂರುತಾ
ಹಸಿರು ಮುರಿವ ತೊಂಗಲನ್ನು

ಕೆಳಗೆ ಮೇಲೆ ತೂಗುತಾ
ಬರುವ ನಿನ್ನ ಅಂದ ಚೆಂದ
ಸೂಸು ಸೊಗಸು ಆನಂದ.
ಗುಳ್ಳಗಂಜಿ ತೊಡವ ತೊಟ್ಟು
ಹಾವಸೆಯಾ ಉಡುಪನುಟ್ಟು
ನಗುವ ತುಟಿಯು ನನೆದ ಎವೆಯ
ತರಳ ನೀನು ಶ್ರಾವಣಾ,
ಅಳಲು ನಗಲು ತಡವೆ ಇಲ್ಲ
ಇದುವು ನಿನಗೆ ಆಟವೆಲ್ಲ
ಬಾರೊ ದಿವ್ಯ ಚಾರಣಾ
ತುಂಟ ಹುಡುಗ ಶ್ರಾವಣಾ.

ನೀನು ನಡೆದು ಬಂದ ಮಾಸ
ಹೆಣ್ಣೆ ತವರುಮನೆಯ ವಾಸ
ಬರಿಯ ಆಟ, ಬರಿಯ ಹಾಸ
ಮಧುಮಾಸಕಿಂ ಹಿರಿದದು
ಮಧುರ ಮಾಸ ಸರಿಯದು.
ಮೋಡಗವಿದ ಕಣ್ಣಿನವನು
ಮುದಿಯ ತಂದೆ ಮುಗಿಲರಾಯ
ನಿನ್ನನ್ನೆ ಬಯಸಿದಾ
ಕಣ್ಣೊ ಕೆನ್ನೆ ತೊಯ್ಸಿದಾ.
ಬಿಸಿಲಹಣ್ಣೊ ತಿಂದು ಹೊತ್ತು
ಹೆತ್ತೆ ನಿನ್ನ ಭೂಮಿತಾಯಿ
ಪಾಪ, ನಿನ್ನ ನೆನಸಿತು
ಎದೆಯ ಸೆರಗ ನನೆಸಿತು.
ಅಂತೆ ಬಂದೆ ಬಾರಣಾ
ಬಾರೊ ಮಗುವೆ ಶ್ರಾವಣಾ !

# ೧೭. ಋತುಗಾನ

ಹಗಲಿರುಳಿನ ತೆರೆಮರೆ ತೆರೆದಾಟದ ಸರಿ ತೂಕ,
ದೇವರ ರತ್ನಾಭರಣದ ನಕ್ಷತ್ರದ ಲೋಕ ;
ನೆಲದಲಿ, ಮಲೆಯೊಳು, ಮರದಲೆಯಲಿ ಪುಷ್ಪಾಲೋಕ ;
ಸಂಜೆಯ ಮುಂಜಾವದ ಕೆಂಬೆಳಕಿನ ಸಮಪಾಕ.

ನೆಲದಪ್ಪುಗೆಯುಕ್ಕಂದಕೆ ಕಡಲೇರಿಳಿವಾಟ ,
ಪಡು ಮೂಡಲ ಕಾರ್ನೀರನು ಎರೆವೆಲರಿನ ತೀಟ ;
ಬೀಳುವ ಬೀಜವೆ ಮೊಳೆತಿರೆ, ತೆನೆ ಹಿಡಿಯುವ ಮಾಟ ,
ಇಗೊ ಮರಣವು, ಅಗೊ ಜನನವು, ಜೀವನದುಸಿರಾಟ.

ಒಂದಾಗುತ ಹೊಂದಿಸಿಕೊಳುತನುರಾಗದ ಮರುಳು ,
ಮಂದಸ್ಮಿತ ವೈಗೂಡಿಸಿ ಕುಂದದ ನಗೆಗಳೊಲು,
ಬೆಲ್ಲದ ಸವಿ ಕುಸಿರಿಡುತಿರೆ ಒಡೆದಿಹ ತುಟಿಗಳೊಳು
ಚಳಿಗಾಲಕೆ ಚಿಗುರಿಟ್ಟಿತು ದಾಂಪತ್ಯದ ತಿರುಳು.

ಕ್ಷಣ ಕ್ಷಣವೂ ಹೊಸ ಹೊಸದಿದು ಘನಗಗನ ವಿತಾನ,
ದಿನ ದಿನ ಗ್ರಹಮಾಲೆಯ ರಿಂಗಣಗುಣಿತದ ತಾನ,
‘ ತಿರುತಿರುಗಿಯು ಹೊಸತಾಗಿರಿ ’ ಎನುತಿದೆ ಋತುಗಾನ
ಈ ಹಾಡಿಗೆ ಶ್ರುತಿಹಿಡಿದಿದೆ ಬ್ರಹ್ಮಾಂಡದ ಮೌನ.

## ೧೮. ಚಿಗುರೆ



ಹೊಗರುಗಣ್ಣು, ನಿಗುರಿದ ಕಿವಿ
ಹಗುರು ಮೈಯ್ಯ ಚಿಗುರೆಯು
ಎರಡೆ ದಿವಸ ಕೂಡಿ, ಬೇಡಿ
ತಿಗುರಳಿದಿತು ಚಿಗುರೊಲು.

ಚಿಗುರೆ ಬಂತು ಚಿಗುರೆ ಹೋಯ್ತು
ಬೀಸು ಗಾಳಿ ಸುಳಿಯೊಲು ;
ಅಹಾ ಎನಿಸಿ, ಅಯ್ಯೊ ಅನಿಸಿ
‘ ಇತ್ತೊ ಇಲ್ಲೊ ’ ಎನುವೊಲು.

ಮನೆಯೊಳೇನೋ ಬಂದಿತು
ಮನದೊಳೇನೋ ನಿಂದಿತು
ಚಿತ್ತದಲ್ಲಿಯು ಚಿತ್ರವಿದ್ದೂ
ಭಾವ ‘ ಭ್ರಮೆಯಿದು ’ ಎಂದಿತು
ಜೀವವೇಕೋ ನೊಂದಿತು.

# ೧೯. ಬಾಳಗರುಡಿ

ಬಾಳಗರುಡಿಯಲ್ಲಿ ಬೆಳೆದ ಆಳು ಬಂತು ಕಹಳೆ ಹಿಡಿದು
ಏಳಿ ಏಳಿ, ಕೇಳಿ ಕೇಳಿ, ಅದರ ಕರೆಯನು:
ಬೀಸಾಡಿ ಬಿಡಿರಿ ಅತ್ತ ಹುಲ್ಲುಬದುಕ ಹೊರೆಯನು
ಹರೆದು ತೂರಿದು ಎಸೆಯಿರತ್ತ ತೆರೆಯ ನರೆಯ ಜರೆಯನು
ಮೆಟ್ಟಿ ನಿಲ್ಲಿ ಜಟ್ಟಿಯಂತೆ ತಿರಿ ತಿರುಗುವ ತಿರೆಯನು
ಹಾರಿರೋ ಸೇರಿರೋ ಹರಿವ ನೀರ

ಉರಿವ ಬೆಳಕ

ಹಿರಿಗಾಳಿಯ ನೆರೆಯನು

ಏನು ದಿವಸ ನೆವ್ಮ್ಮಿರುವದು ಬೆಸೆದ ಉಸಿರ ಸೆರೆಯನು;
ಕಲ್ಲಲೆಯಲಿ ನೀರುಲಿಯಲಿ ಮಿಂಚೊಲೆಯಲಿ

ಗಾಳಿ ಗಾಳಿ ಹರಿಯಲಿ
ಗುಡುಗಿನ ಎದೆ ತೂರೆಯಲಿ;

ಮುಗಿಲಿಗೆ ನಿಚ್ಚಣಿಕೆ ಬೇಕು

ಹಳೆಯ ಹಾಳ ಹೂಳಬೇಕು
ಬಾಲಚಿಕ್ಕೆ ಕೀಳಬೇಕು
ಗಂಗೆಬಸಿರ ಊಳಬೇಕು

ಚಂದ್ರ ಸೂರ್ಯ ಸಾಲವೋ, ಬಂತು ಬೇರೆ ಕಾಲವು

## ೨೦. ಮನುವಿನ ಮಕ್ಕಳು

ಗಾಳಿಯು ಸುಳಿ ಸುಳಿ ಸೂಸುವದು
ಬಿಮ್ಮನೆ ಬೀಸುವದು.
ಪ್ರಾಣತರಂಗಿಣಿ ತುಳುಕುವಳು
ದಡಗಳ ದುಡುಕುವಳು.
ಹೂಗಂಪಿನ ಹುಡಿ ಮಿಸುಕುವದು
ಗಮ ಗಮ ಮುಸುಕುವದು.
ಬಾಳಿನ ಕೊಳಲುಲಿ ಕೇಳುವ ವರೆಗೂ
ಕೇಳಲು ಕಿವಿಯಿಲ್ಲ.
ಬೆಳುದಿಂಗಳು ಬಿಸಿಲಾಡಿದರೇನು—
ನಾಲಿಗೆ ಸವಿಯಿಲ್ಲ.
ಜಗವು ಕಲ್ಲಿಗೂ ಕಡೆಗಾಗಿರುವದು
ಜೀವವು ಕವಿಯಲ್ಲ.
ಪಾರಿವಾಳಗಳ ಮೈಜೋಡು
ಗಿಡಗದ ಮುಖಕೀಡು.
ಆವಿಗೆ ದಿನ ದಿನವೂ ಕುತ್ತು
ಸಿಂಹಕೆ ಸವಿತುತ್ತು.
ಮಲಸಂಬಂಧದ ಭಾಗಾದಿ
ಹದ್ದಿಗೆ ಹಳೆಹಾದಿ.
ಶಿಬಿ ದಿಲೀಪ ಜೀಮೂತವಾಹನರು
ಮಣ್ಣನು ಮುಕ್ಕಿದರು
ಸ್ವರ್ಗದೊಳಿದ್ದೂ ಸಂಶಯ ಬಂದಿತು
ಕಣ್ಣಳ ತಿಕ್ಕಿದರು
ತಮ್ಮ ನಾಡಿನಲಿ ನಡೆದಿಹ ಲೀಲೆಯ
ನೋಡುತ ಬಿಕ್ಕಿದರು.

ದುಡಿವರ ಉಸಿರಿಗೆ ದಣಿವಿಲ್ಲ
ಕೊನೆಗೂ ತಣಿವಿಲ್ಲ.
ಕೂಸುಗಳಾಟಕೆ ಕಳೆಯಿಲ್ಲ
ಭೂಮಿಗೆ ಬೆಳೆಯಿಲ್ಲ.
ಹೆಣ್ಣಿನ ಕಂಬನಿ ತೊಡೆದಿಲ್ಲ
ಗಂಡಿಗೆ ಬಿಡುವಿಲ್ಲ
ಹಸಿವೆಯ ಕೂಗಿನ ಕಹಳೆಯ ಕೇಳಿ
ಜೀವವು ನಡುಗುವದು
ಸಾವರ ಎದೆಗಳ ಭೇರಿಗೆ ಎತ್ತೋ
ಓಡಲು ತೊಡಗುವದು
ಮನುವಿನ ಮಕ್ಕಳ ಬೇಟೆಯ ಕಂಡು
ತನ್ನೊಳಗಡಗುವದು.
ಧರ್ಮಕೆ 'ಧರ್ಮ ಽ' ಎನಬೇಡಾ
ಕರ್ಮವು ಇದು ನೋಡಾ ;
ಹಗರಣದೊಳಗಿನ ಸೋಗುಗಳು
ಅವುಗಳ ಕೂಗುಗಳು.
ಜೀವದೇವನೇ ಮೈವೆತ್ತು
ನೀನೇ ತಲೆಯೆತ್ತು.
ವೇದಾಂತಿಯ ಮುಖಮುದ್ರೆಯ ನೋಡಿ
ಕನಿಕರ ಹುಟ್ಟುವದು,
ಹತ್ತವತಾರದ ಹೇಡಿತನಕ್ಕೆ
ಮನ ಗೊಣಗುಟ್ಟುವದು,
ಗಾಳಿಗೆ ಗಾಳಿಯು ಬಯಲಿಗೆ ಬಯಲು
ತಲೆ ರಣಗಟ್ಟುವದು.

## ೨೧. ಯಜ್ಞ

ಸಾವು ತನ್ನ ಹಸಿವ ಕಳೆಯೆ
ಆಸೆಯಿಂದ ತೆರೆದ ಬಾಯು
ಕೆಂಡದಂಥ ಕೊಂಡದಲ್ಲಿ
ಕೊಳು ಕಾಡ ಉರುವಲಂತೆ
ಹೊಗೆಯ ಧಗೆಯ ಹುಟ್ಟಿಸುವದು
ಉರಿಯನಲ್ಲೆ ಅಟ್ಟಿಸುವದು ;
ಕೈಯ ತುತ್ತು ಬಾಯಿಗಿಲ್ಲ
ಎಂಬ ಮಾತು ಸುಳ್ಳುಬಿದ್ದು
ಬಾಯಿಗಿದ್ದು ಹೊಟ್ಟೆಗಿಲ್ಲ
ಹೊಸತು ಮಾತು ಸತ್ಯವಾಯ್ತು.
ಪ್ರಾಣವೊಂದು ಮೂಕ ಪ್ರಾಣಿ
ಎನುವ ಹಾಗೆ ಬಲಿಯು ಎಂದು
ಬಡಿಸಿಕೊಂಡು ಬಾಡಿಸುವೆನು
ಎಂಬ ಜಂಭ ಸಾವಿಗಿಹುದೆ ?
ಹರಣವಹುದು ಹೊತ್ತ ಹಂಚು
ಹುರಿದ ಅರಳು ಸಾವುಗೀವು.
ಬೆದರಿಗಂಜಿ ನಾಯಲಿಕ್ಕೆ
ಪ್ರಾಣ ಪುಕ್ಕ ಹಕ್ಕಿಯಲ್ಲ.
ಪ್ರಾಣದುಸಿರು ಗಾಳಿ ತನ್ನ
ಏಳು ತಾಳ ಹಾಕುತಿರಲು
ಸುತ್ತು ಹತ್ತುನಾಲ್ಕುಲೋಕ
ದಣಿವರಿಯದೆ ಕುಣಿಯುತಿಹವು.
ಬೆಳಕಿನಿಂದ ಬೆಳೆದು ಬಂದ
ಬೆಳೆಯು ತುತ್ತು ಬೆಳಕಿಗಿಲ್ಲೆ ?

ತೆರೆದ ಕಣ್ಣ ನೋಟದಿಂದ
ಅನ್ನವನ್ನು ಉಣ್ಣಲೇಕೊ ?
ಬಾಯಿ ತೆರೆಯೆ, ಹಣೆಯ ಕಣ್ಣೆ !
ತಾಯಿ ಕೂಸ ತಿನ್ನುವಂತೆ—
ಬೆಳಕ ನುಂಗಿ ನೀರ ಕುಡಿದು
ಬೆಳೆಯು ತಿಂದು ತೇಗು ತೇಗು.
ನಿನ್ನ ತುತ್ತು ನಿನಗೆ ದಕ್ಕು.
ಮೂರುಲೋಕದಲ್ಲಿ ಹರಿವ
ಗಂಗೆ ಮೊಸಲನ್ನು ಮುರಿಯೆ
ಮೀನ ಮೊಸಳೆಗುಂಟೆ ಬಾಯಿ ?
ನನ್ನ ನನ್ನ ನನ್ನದೆಂದು
ತನ್ನ ತನ್ನ ತಾನಿನಲ್ಲಿ
ಕಂಡಬಾಯಿ ಸಿಕ್ಕ ಹಾಗೆ
ಅನ್ನ ತಿನ್ನಲೆಣಿಸಲಾಗಿ
ಎಂಜಲಾಗಬಲ್ಲದೇನು ?
ಬೆಳಕಬಾಳ ಬೆಳಸಲಿಕ್ಕೆ
ಬೆಳೆಯು ಬಾಳು ಬೆಳೆದು ಬಂತು.
ಉಳಿದ ಹಾಳು ಬಾಯಿಗಳಿಗೆ
ಕಾಳುಕಡಿಯು ಹುಟ್ಟಲಿಲ್ಲ.
ಅನ್ನವಮೃತವಿದ್ದ ಹಾಗೆ
ಯಾರ ಬಾಯಿಯಲ್ಲು ಕೂಡ
ಕರಗಲಿಲ್ಲ, ಅರಗಲಿಲ್ಲ.

ಅನ್ನಗಿನ್ನವೇಕೆ ಬೇಕು ?
ಪ್ರಾಣವಾಯುವನ್ನು ಕುಡಿದು
ಪ್ರಾಣದೀಪ ಬೆಳಗದೇನು ?

ಕುಡಿವ ಕುಡಿಯು ಮಾತ್ರ ಬೇಕು.
ಎದೆಯ ಮುಗುಳೆ ! ಎಲರನುಣಲು
ಅರಳು, ಅರಳು, ಉಂಡು ಅರಳು.
ನಿನ್ನ ಅರಳು ಮೊಗ್ಗೆ ಮೊಗವೆ
ಜೀವವೆಂಬ ರತ್ನದೀಪ;
ಸಾವು ಕತ್ತಲನ್ನು ಕೆಡಿಸಿ
ಬೆಳ್ಳಬೆಳಗು ಬೆಳಗಬಲ್ಲ
ಬೆಂಕಿ ಕಿಡಿಯು, ಬೆಳಕ ಮಿಡಿಯು.
ಹೊತ್ತುಮೂಡಿಬರುವ ಹೊತ್ತ
ಗೊತ್ತುಮಾಡಿಕೊಡಲು ನೀನೆ
ಒಂದೆ ಒಂದು ಹಾದಿಯಹುದು.
ಬೆಳಕಿನೊಂದು ಗೊತ್ತು ಹೊತ್ತು
ಬೆಳಕೆ ಬಲ್ಲದಲ್ಲವೇನು ?
ಕತ್ತಲನ್ನು ಒಂದೆ ತುತ್ತ
ಮಾಡಬಲ್ಲ ಹೊತ್ತೆ ಹೊತ್ತು.
ಕತ್ತಲನ್ನು ಕೊಲುವ ಕುತ್ತ.
ಹೊತ್ತು ಬಂತು ! ಬಂತು ಹೊತ್ತು !

# ೨೨. ಅನ್ನಾವತಾರ

ದೃಶ್ಯ–ಆ ಕಡೆಗೆ ರತ್ನಾಕರ ( ಸಮುದ್ರ ), ಈ ಕಡೆಗೆ ವಸುಂಧರಾ ( ಭೂಮಿ ) ಕುಳಿತಿದ್ದಾರೆ. ನಡುವೆ ನಿತ್ರಾಣನಾದ ಪ್ರಾಣದೇವನು ಬಿದ್ದು ಕೊಂಡಿದ್ದಾನೆ.

ರತ್ನಾಕರ

ಹೆಸರು ರತ್ನಾಕರ
ಕುಡಿಯುವೆ ಕಣ್ಣೀರಾ
ಅಯ್ಯೋ ನನ ತೀರಾ —ತೀರದು ದುಃಖಾ
ತೀರದು ದುಃಖಾ

ವಸುಂಧರಾ

ಮಗುವು ನಿರಾಧಾರಾ
ಹೆಸರು ವಸುಂಧರಾ
ಇಟ್ಟಾರ ಯಾರು ನಿಟ್ಟುಸಿರಿನ
—ಲೆಕ್ಕಾ ?
ಉಸುರಿನ ಲೆಕ್ಕಾ ?

ರತ್ನಾಕರ

ಗೆದ್ದನು ಸತ್ತಾವ,
ಸತ್ತಾನ ಇದ್ದಾವ,
ಇದ್ದಾಗ ಇವ್ಹಾಂಗ ಅನಿಸಲೆ ಇಲ್ಲಾ
ಅನಿಸಲೆ ಇಲ್ಲಾ

ವಸುಂಧರಾ

ಹಾಳಾದರೂ ಪ್ರಾಣಿ
ಹೂಳಿದ ಅವನೆಲಬು
ಬಾಳೇವು ಅಂತಾವ ಮಣ್ಣು
—ತಿನ್ನುತ್ತಾ
ಮಣ್ಣು ತಿನ್ನುತ್ತಾ

ರತ್ನಾಕರ

ನೀರ ದೇವನು ಬಂದ
ತೀರ ದೇವನು ಬಂದ
ಯಾರು ಬಂದರು ಆಹಾರಾ ತರಲಿಲ್ಲಾ
'ಹಾರಾ ತರಲಿಲ್ಲಾ

ವಸುಂಧರಾ

ಕಾಡೋ ದೇವನು ಬಂದ
ಬೇಡೋ ದೇವನು ಬಂದ
ನೀಡದೆ ಈ ಹೊಟ್ಟೆ ಇನ್ನೂ
—ತುಂಬಿಲ್ಲಾ
ಇನ್ನೂ ತುಂಬಿಲ್ಲಾ

ರತ್ನಾಕರ

ದುಡುಕು ದೇವನು ಬಂದ
ಮಿಡುಕು ದೇವನು ಬಂದ
ಬಡವರ ಬಡಹೊಟ್ಟೆ ತಣ್ಣಗಿರಲಿಲ್ಲಾ
ತಣ್ಣಗಿರಲಿಲ್ಲಾ

ವಸುಂಧರಾ

ಯುದ್ಧದೇವನು ಬಂದಾ
ಬುದ್ಧದೇವನು ಬಂದಾ
ಇದ್ದವರ ಇರುಚಿಂತೆ
—ಬಗೆಹರಿಯಲಿಲ್ಲಾ
ಬಗೆಹರಿಯಲಿಲ್ಲಾ

ರತ್ನಾಕರ

ಕಲ್ಕಿದೇವನು ಬಂದ
ಉಳ್ಕಿ ದೇವರ ತಂದ
ಸಲ್ಕಿ ಗುದ್ದಲಿಯಿಂದ ತೋಡಿದನಲ್ಲಾ
ತೋಡಿದನಲ್ಲಾ

ವಸುಂಧರಾ

ಎಲ್ಲಾ ದೇವರು ಬಂದು
ತಲ್ಲಣಗೊಂಡರು
ಇಲ್ಲಿಯವರ ಕಾಟ ಇಲ್ಲ್ಯಾಳಿಯಿ
—ತಲ್ಲಾ
ಇಲ್ಲ್ಯಾಳಿಯಿತಲ್ಲಾ

ಪ್ರಾಣದೇವನು ನಿ-
ತ್ರಾಣನಾಗುತ ಅಂದ
'ಅನ್ನದೇವರು ಮಾತ್ರ ಇನ್ನೂ ಬರಲಿಲ್ಲೋ
ಇನ್ನೂ ಬರಲಿಲ್ಲಾ'

# ೨೩. ಭೂಮಿತಾಯಿಯ ಚೊಚ್ಚಿಲ ಮಗ

ಭೂಮಿತಾಯಿಯಾ
ಚೊಚ್ಚಿಲ ಮಗನನು
ಕಣ್ತೆರೆದೊಮ್ಮೆ
ನೋಡಿಹಿರೇನು ?

ಮುಗಿಲೆಂಬುವದು
ಕಿಸಿದಿತು ಹಲ್ಲು !
ಬಂದಾ ಬೆಳೆಯು
ಮಿಡಿಚಿಯ ಮೇವು ;
ಬಿತ್ತಿದ್ದಾಯಿತು
ಉತ್ತಿಹ ಮಣ್ಣು !
ದಿನವೂ ಸಂಜೆಗೆ
ಬೆವರಿನ ಜಳಕ,
ಉಸಿರಿನ ಕೂಳಿಗೆ
ಕಂಬನಿ ನೀರು !
ಹೊಟ್ಟೆಯು ಹತ್ತಿತು
ಬೆನ್ನಿನ ಬೆನ್ನು !
ಎದೆಯ ಗೂಡಿನೊಳು
ಚಿಂತೆಯು ಗೂಗಿ !
ಮಿದುಳಿನ ಮೂಲೆಗೆ
ಲೊಟ ಲೊಟ ಹಲ್ಲಿ !
ಮೋರೆಯು ಸಾವನು
ಅಣಕಿಸುತಿಹುದು !
ಕೊರಳಿಗೆ ಹತ್ತಿದೆ
ಸಾಲದ ಶೂಲ !

ಆದರು ಬರದೋ
ಯಮನಿಗೆ ಕರುಣ
ಉಸಿರಿಗೆ ಒಮ್ಮೆ
ಜನನಾ ಮರಣಾ.

*     *     *

ನರಗಳ ನೂಲಿನ
ಪರೆ ಪರೆ ಚೀಲಾ
ತೆರೆ ತೆರೆಯಾಗಿದೆ
ಜಿರಿಜಿರಿಯಾಗಿದೆ ;
ಅದರೊಳಗೊಂದು
ಎಲುಬಿನ ಬಲೆಯು !
ಟುಕು ಟುಕು ಡುಗು ಡುಗು
ಉಲಿಯುವ ನರಳುವ
ಜೀವದ ಜಂತುವು
ಹೊರಳುತ ಉರುಳುತ;
ಜನುಮವೆಂಬುವಾ
ಕತ್ತಲೆಯಲ್ಲಿ
ಬಿದ್ದಿದೆ ಒಳಗೆ
ಹೇಗೋ ಬಂದು !
ಸಾವಿನ ಬೆಳಕದು
ಕಾಣುವದೆಂದು ?
ಎಂದೋ ಎಂದೋ
ಎಂದೋ ಎಂದು
ಕನಕರಿಸುವದು
ತಳಮಳಿಸುವದು !

---

# ೨೪. ಕುರುಡು ಕಾಂಚಾಣಾ

ಕುರುಡು ಕಾಂಚಾಣಾ ಕುಣಿಯುತಲಿತ್ತು ।
ಕಾಲಿಗೆ ಬಿದ್ದವರ ತುಳಿಯುತಲಿತ್ತೋ ॥
ಕುರುಡು ಕಾಂಚಾಣಾ ॥

ಬಾಣಂತಿಯೆಲುಬ ಸಾ-
ಬಾಣದ ಬಿಳುಪಿನಾ
ಕಾಣದ ಕಿರುಗೆಜ್ಜಿ ಕಾಲಾಗ ಇತ್ತೋ ;

ಸಣ್ಣ ಕಂದಮ್ಮಗಳ
ಕಣ್ಣೀನ ಕವಡೀಯ
ತಣ್ಣನ್ನ ಜೋಮಾಲೆ ಕೊರಳೊಳಗಿತ್ತೋ ;

ಬಡವರ ಒಡಲಿನ
ಬಡಬಾನಲದಲ್ಲಿ
ಸುಡು ಸುಡು ಪಂಜು ಕೈಯೊಳಗಿತ್ತೋ ;

ಕಂಬನಿ ಕುಡಿಯುವ
ಹುಂಬ ಬಾಯಿಲೆ ಮೈ-
ದುಂಬಿದಂತುಧೊ ಉಧೊ ಎನ್ನುತಲಿತ್ತೋ ;

ಕೂಲಿ ಕುಂಬಳಿಯವರ
ಪಾಲಿನ ಮೈದೊಗಲ
ಧೂಳಿಯ ಭಂಡಾರ ಹಣೆಯೊಳಗಿತ್ತೋ ;

ಗುಡಿಯೊಳಗೆ ಗಣಣ, ಮಾ-
ಹಡಿಯೊಳಗ ತನನ, ಅಂ-
ಗಡಿಯೊಳಗ ಝಣಣಣ ನುಡಿಗೊಡುತಿತ್ತೋ ;

ಹ್ಯಾಂಗಾರೆ ಕುಣಿಕುಣಿದು
ಮುಂಗಾಟ ನಡೆದಾಗ
ಆಂಗಾತ ಬಿತ್ತೋ, ಹೆಗಲಲಿ ಎತ್ತೋ ;

## ೨೫. ಸಿಟ್ಟು—ಸಾಂತಿ

ಹೊಲೆ ಸಿಟ್ಟು ಬೇಡಿತು ಹೆಂಡತಿಯ ಶಿವಗೆ:
'ತಕ್ಕವಳೊಬ್ಬಳನು ಹುಟ್ಟಿಸು ಇವಗೆ'
ಎಂದೆನಲು, ಬ್ರಹ್ಮನು ಹಚ್ಚಿ ಸಮಾಧಿ
ಕುಳಿತನು; ಹೊಸ ಹೆಣ್ಣು ಹುಟ್ಟಿಸುವ ಹಾದಿ
ಹುಡುಕುತ ಹುಡುಕುತ ಹುಡುಕುತ ಹೊರಟೆ
ಪ್ರಳಯದ ಬಸಿರೊಳಗದರೊಂದು ಗೊರಟೆ
ಸಿಕ್ಕಿತು, ನಕ್ಕ ತನ್ನಷ್ಟಕ್ಕೆ ತಾನು;
'ಇವರು ಕೂಡಿದರಿನ್ನು ನನ್ನ ಗತಿಯೇನು?
ದೇವರ ಚಿತ್ತವು ನನಗೇಕೆ ಚಿಂತೆ?
ಒಗೆತನ ಕೂಡಿತು ಅಂತಿಗೆ ಅಂತೆ'
ಎಂದನು ಬ್ರಹ್ಮನು, ಕೇಳಿದ ಶಿವನು—
'ಹಾಳಾಗಲಿ' ಎಂದು ಅವನೂ ಮಲಗಿದನು.
ಯಾರಿವಳು ಎನಬೇಡಿ ಅತ್ತು, ಜೇನತ್ತು,
ಬಲ್ಲಿದರ ತೊತ್ತಿವಳು, ಬಡವರ ಮೃತ್ಯು;
ಸಿಟ್ಟಪ್ಪ ಸಾಂತಿಯನಪ್ಪಲು ಬಂದ
ಬಲು ಹಿಗ್ಗಿ, ಬಲು ನಕ್ಕು, ಭಲೆ ಭಲೆ ಎಂದ.
ಗತಿಯಾರು ಕೇಳಲು ಈ ಬಡ ಸೃಷ್ಟಿಯನು
ಕಂಡವರು ಮಾಡಿದರು ಅಶ್ರುವೃಷ್ಟಿಯನು.

# ಸಾಂತಿ

ಕುಣಿಮಣ್ಣು ಕೊಟ್ಟವು ಮಾಡಲು ನಿನ್ನ,
ಚಿತೆ ಬೆಂಕಿಯಿಕ್ಕಿತು, ಅದೇ ನಿನ್ನ ಬಣ್ಣ,
ಗೋರಿಯ ಹೂಗಳು ಆದವು ಕಣ್ಣು,
ಹುಟ್ಟಿದೆ ಜಗದೊಳಗೆ ನೀ ಹೊಸ ಹೆಣ್ಣು.
ಗದ್ದಿಗೆ ಮೇಲೊಂದು ಸಿದ್ದಿಗೆಯಿರಿಸಿ
ಕಲ್ಯಾಣ ಕಟ್ಟಿದರು ಸಾವನ್ನು ಕರೆಸಿ
ಪ್ರೇತ ಕಳೆಯ ನಿನ್ನ ರಾವುಮುಖ ನೋಡಿ
ಸಾವೆ ಸತ್ತಿತೊ ಏನೊ, ಹತ್ತಿತು ಸಮಾಧಿ.
ಮುಂಡೆಯೊ ಮುತ್ತೈದೆಯೊ ನೀನು ಎಂದು
ನೋಡಿದವರಿಗೆಲ್ಲ ಸಂಶಯ ಬಂದು
ನಿನ್ನ ಹತ್ತಿರ ಯಾರೂ ಹಾಯುವದಿಲ್ಲಾ
ನೀನೆ ಎಲ್ಲರನ್ನು ಹಾಯುವಿಯಲ್ಲ !

*　　　*　　　*

ಎಲ್ಲೆಲ್ಲು ಗೊಂದಳ ಹಾಕುತಲಿಹಳು
**ಶಾಂತಿಯ** ಮಲತಂಗಿ **ಸಾಂತಿಯೆಂ**ಬುವಳು.

# ೨೬. ಮೊದಲಗಿತ್ತಿ

ಮೊದಲಗಿತ್ತಿಯಂತೆ ಮೆರೆಯುವಿಯೇ ತಾಯಿ ।
ಮೊದಲಗಿತ್ತಿಯಂತೆ ಮೆರೆಯುತಿಹೆ ।। ಪ ।।

ಹಿಂಡಾಗಿ ಪುಂಡರು ಅಂಡಲೆಯಲು ನಿನ್ನ
ನೆತ್ತರು ಒರೆಹಚ್ಚಿ ನೋಡಿರುವೆ
ಪಾತಾಳ ಕಂಡರು ಕೆಲ ತಾಯಿಗ್ಗಂಡರು
ಅವರನ್ನೂ ಮಡಿಲಾಗ ಮಡಗಿಸಿಹೆ
ಹದಿನಾರು ರಾಜರು ತಲೆಕೆಳಗಾದರು
ಆದರು ತಲೆಯೆತ್ತಿ ನಿಂತಿರುವೆ
ನಿನ್ನ ತೇಜದ ಮುಂದೆ ರಾಜತೇಜವು ಕೂಸು
ಮೊದಲಗಿತ್ತಿಯು ನೀನು ಮೆರೆಯುತಿಹೆ.

ಒಕ್ಕುಡಿತೆ ಅರೆಮುಕ್ಕು ಎನುತೆನುತೆ ಹಲಕೆಲವು
ಪಾನಿಪತ್ತುಗಳನ್ನು ಮುಕ್ಕುಳಿಸುವೆ
ಕೊಡಲಿ ರಾಮನು ಎರೆದ ಕೆನ್ನೀರ ಜಳಕಕ್ಕೆ
ಕೂದಲು ನನೆಯಲಿಲ್ಲೆನ್ನುತಿಹೆ
ಅವತಾರಕ್ಕೊಂದೊಂದು ಅಭಿಷೇಕ ಮಾಡಿದರು
ಎಣ್ಣೆಮಜ್ಜನ ಬೇರೆ ಬೇಕೆನುವೆ
ನೆತ್ತರ ಮೀಯಿಸುವ ಕೆಂಚರ ಕೈಯಿಳಿಸಿ
ಮೊದಲಗಿತ್ತಿಯೆ ನೀನು ಮೆರೆಯುತಿಹೆ.

ಹಾಲಿನ ಹೃದಯಕ್ಕೆ ಉಬ್ಬುಸವನು ತೊಡಿಸಿ
ಹೂ ಮುಡಿಸಿಕೊಂಡೆಂದು ನೀ ನಲಿವೆ ?
ಬಸಿರು ತುಂಬಲು ಹಸಿರುಡಿಗೆಯನುಟ್ಟೆಂದು
ವನವಾಸ ನವಮಾಸ ತೀರಿಸುವೆ ?

ಮುನ್ನಿಲ್ಲ ಇನ್ನಾರೆ ಮಕ್ಕಳದಿನವೆಂದು
ಮೂಡೀತು ಹೇಳವ್ವ ಬಿನ್ನವಿಸುವೆ.
ಎಂದು ಮಂಗಲ ನಿನ್ನ ದೇವಗರ್ಭಕೆ ?—ಇನ್ನೂ
ಮೊದಲಗಿತ್ತಿಯಂತೆ ಮೆರೆಯುತಿಹೆ !

# ೨೭. ಇದೊ ಪಂಜರ

ಇದೊ ಪಂಜರ, ಅದೊ ಮುಗಿಲು !
ಒಂದು ಕಿರಿದು, ಒಂದಗಲು !

ಅಲ್ಲಿ ಇರುಳಿನಲ್ಲಿ ಬೆಳಗು,
ಕತ್ತಲಿಲ್ಲಿ ಒಳಗು ಹೊರಗು,
ನೊಣ ನೊರಜಿಗು ನೊಳ್ಳಿಗಳಿಗು
ಹಾರಲಿಂಬು ಎಲ್ಲ ಬಳಿಗು

ಅಲ್ಲಿ ; ಇಲ್ಲಿ ಒಂದೆ ಗೋಡೆ
ಸುತ್ತು ಮುತ್ತು ಎತ್ತ ನೋಡೆ.
ಬರುವವರೆಗೆ ಒಳಗಡೆಗೆ
ಬೆಲೆಯು ಬರದು ಬಿಡುಗಡೆಗೆ ;

ಸಂಕಟಗಳದದು ಮಾಲೆ ;
ಹರಿಯು ಕಲಿಸಲಿದು ಶಾಲೆ.
ಆ ತಿಳಿವಿಗೆ ಇಲ್ಲಿ ಹಗಲು
ಮುಗಿಲಿಗು ಪಂಜರ ಮಿಗಿಲೋ
ಮುಗಿಲಿಗು ಪಂಜರ ಮಿಗಿಲು.

# ೨೮. ನಿದ್ದೆ

ಕಾಣುವ ಕಣ್ಣುಕಟ್ಟಿಲ್ಲ
ಕನಸಿನ ಕಣ್ಣಿಕೆಸುರಿಲ್ಲ—
ಇಲ್ಲಿ ಇನಿಸು ದಣಿವಿಲ್ಲ
ಮಣಿಹವೆಲ್ಲ ತಣಿವಲ್ಲ.

ಈ ಎಚ್ಚರದೀ ಹೆಚ್ಚಳ
ಈ ನೇರಿತು ಈ ನಿಚ್ಚಳ
ಮೂಡಲಿಲ್ಲಿ ಅರಸು ನಾನು,
ನಿಂತ ನೆಲೆಯೆ ಲೋಕ ತಾನು.

ಹೆಡೆ ಬೆಳಕಲಿ ಹಾದಿ ಕಂಡು
ಕೇಳಿಕೆ ಕಣ್ಣಾರಿಕೆಯಂದು.
ಹುಡುಕುವುದೇನಿನ್ನೆಲ್ಲಿ ?
ಇದೆ ಅದು ಅಂಗೈನೆಲ್ಲಿ.

ಹಳಿಯೆಚ್ಚರ ಅರಹುಚ್ಚು ;
ಹಸುಬುದ್ಧಿಗು ತುಸು ಹೆಚ್ಚು.
ಆ ಎಚ್ಚರ ಈ ನಿದ್ದೆ !
ಸತ್ತು ಹುಟ್ಟಿದಂತಿದ್ದೆ.

## ೨೯. ಅದುವರೆಗೂ

ನಿಟ್ಟುಸಿರಿನ ತಿದಿಯಲ್ಲಿ
ಹೊತ್ತುತಿರುವ ಎದೆಯಲ್ಲಿ
ಕಣ್ಣೀರಿನ ಕುದಿಯಲ್ಲಿ
ಜೀವ ಬೇಯುತಿರುವನು.

ತೊಗಲ ಮೈಯ್ಯ ಮರೆಯಲ್ಲಿ
ಒಳ ಉಸಿರಿನ ಒರೆಯಲ್ಲಿ
ನಿದ್ದೆ ನೀರ ತೆರೆಯಲ್ಲಿ
ದೇವ ಕಾಯುತಿರುವನು.

ತೆರೆಮರೆಗಳನೆತ್ತರಿಸಿ
- ತೊಡಕುಗಳನು ಕತ್ತರಿಸಿ
ಅವನ ಬೆಳಕ ಬಿತ್ತರಿಸಿ
- ಶಕ್ತಿಯೊಂದು ಬರುವದು.

ಆ ಶಕ್ತಿ ಅಲಗಿನಂತೆ-
ಈ ಪ್ರಪಂಚ ಗಲಗಿನಂತೆ.
ಅದುವರೆಗೂ ಮಲಗಿದಂತೆ
ನಾವು ತಾಳಿಯಿರುವದು.

# ೩೦. ಸಚ್ಚಿದಾನಂದ

ಸಚ್ಚಿದಾನಂದ, ಸಚ್ಚಿದಾನಂದ, ಸಚ್ಚಿದಾನಂದ. ಸಚ್ಚಿದಾನಂದೋಂ।
ಸಚ್ಚಿದಾನಂದ ॥ ಪ ॥

ಸತಿ : ಬಾ, ಹಾಕು ರಿಂಗಣಾ ಗಗನದಂಗಣದಾಗ।
ನನ್ನ ಕಾಲಾಗ ॥
ಒಳಗೊಳಗ ಕುದಿವ ಭೂಕಂಪ,
ಹೊರಗ ಹಸಿತಂಪ
ಮೇಲೆ ನರುಗಂಪೋ। ಮೇಲೆ ನರುಗಂಪು
ಬಂತೆಲ್ಲ ನೆಲದ ಬಸಿರಿಂದ ! ಮನೆಯು ನೆಲದಿಂದ। ಅನ್ನ ಮಣ್ಣಿಂದ।
ಮೈಯು—
ಅದರಿಂದೋಂ—ಸಚ್ಚಿದಾನಂದ।
ಬಾ ಹಾಕು ರಿಂಗಣಾ ಗಗನದಂಗಣದಾಗ।
ನನ್ನ ಕಾಲಾಗ ॥
ನಾ ತೊಟ್ಟ ದೇಹಗಳ ಲೆಕ್ಕ, ಇಡುವರು ಸೊಕ್ಕ।
ಯಮಾ ನೋಡಿ ನಕ್ಕ ॥
ಚೌರ್‍ಯೈಂಶಿ ಲಕ್ಷದಾಸಿಡಿಲು
ಹಿಡಿಯಲೀ ಒಡಲು
ಮುಗಿಲಿನ್ಹಾಂಗ ಸುಡಲೋ। ಮುಗಿಲಿನ್ಹಾಂಗ
ಸುಡಲು।
ನಿನ್ನುಸಿರು ಕಟ್ಟಿದೀ ಬಂಧ। ಐದರ ಸಂದ। ಕಡಲು ಏಳೊಂದ। ಕುಣಿತ—
ಸ್ವಚ್ಛಂದೋಂ—ಸಚ್ಚಿದಾನಂದ।
ನಾ ತೊಟ್ಟ ದೇಹಗಳ ಲೆಕ್ಕ, ಇಡುವರು ಸೊಕ್ಕ।
ಯಮಾ ನೋಡಿ ನಕ್ಕ ॥
ಸಿಗಲೊಲ್ಲಿ ಜೇಕು ನೀ ನನಗ ಜೀವ ಜೀವಾಳಾ।
ರಾಜಘನನೀಳಾ ॥

ನನ ಒಡಪ ಒಡೆದವ ಯಾವಾ
ನೋವೆ ನನ ಜೀವಾ
ಈಗಿನೀ ಭಾವಾ। ಈಗಿನೀ ಭಾವಾ।
ಹಗಲಿರುಳು ಸೋಮರವಿ ಬಂದ। ಅರವು ಮರವಿಂದ। ಮನದ ಮಕರಂದ।
ಸುರಿವ ಅರವಿಂದೋಂ—ಸಚ್ಚಿದಾನಂದ।
ಸಿಗಲೊಲ್ಲಿ ಬೇಕು ನೀ ನನಗ ಜೀವ ಜೀವಾಽಳಾಽ।
ರಾಜಘನನೀಳಾ॥
ಸುತ್ತೆಲ್ಲ ಕತ್ತಲಾ ಒಳಗ ಬೆಳಗತದ ದೀಽಪಾಽ।
ಬಾ ಸಮೀಪಾ॥
ಇದು ಯಾವ ಸೀಮೆಯಾ ಚದುರು।
ನಿಂತಿ ನನ್ನಿದುರು।
ಬಿಟ್ಟ ನಿನನದರೋ। ಬಿಟ್ಟ ನಿನನದರು।
ಇಡು ಬೆಳಕ ಕಾಣಿಕಿ ತಂದ। ಇಟ್ಟ ನನ ಮುಂದ। ಚೆಂದ ಬಿನವಂದ
ಮಾಡಿಸೋ ದುಂದೋಂ—ಸಚ್ಚಿದಾನಂದ।
ಸುತ್ತೆಲ್ಲ ಕತ್ತಲಾ ಒಳಗ ಬೆಳಗತದ ದೀಽಪಾಽ।
ಬಾ ಸಮೀಪಾ।
ಪತಿ: ಇಷ್ಟ್ಯಾಕ ಹಲಬತೀ ಬಾಲಿ, ಬಂದೆ ಮೀನಾಽಕ್ಷಿಽ।
ಪ್ರಾಣವೇ ಸಾಕ್ಷಿ॥
ನೀ ಕೂತಿ ಬೆಂಕಿಯನು ನಂಬಿ
ಪ್ರೀತಿಯದಕೆಂಬಿ
ಕಪ್ಪುರದ ಗೊಂಬಿ। ಕಪ್ಪುರದ ಗೊಂಬಿ।
ಚಂದ್ರಾಮರಾಯ ಬಲು ಚಂದ। ಒಗಟದಾಗ ಅಂದ। ಕಟ್ಟ ಒನಪಿಂದ।
ತಾಳಿಯೂ ನಂದೋಂ—ಸಚ್ಚಿದಾನಂದ
ಇಷ್ಟ್ಯಾಕ ಹಲಬತೀ ಬಾಲಿ, ಬಂದೆ ಮೀನಾಕ್ಷಿ।
ಪ್ರಾಣವೇ ಸಾಕ್ಷಿ॥

ನಾದಲೀಲೆ

ಎಲ್ಲೆಲ್ಲೂ ಬೆಳಕು ಇರಲಾಕ ಆಳುತಿ ನೀ ಹಾಡಿ ।
ಒಡಲ ಮರಿಮಾಡಿ ॥

ನೀ ನನ್ನ ಶಕ್ತಿ, ನಾ ಭಕ್ತಿ
ತೆರೆಯಿತು ಶುಕ್ತಿ
ಬೇರೆಯಿಲ್ಲ ಮುಕ್ತೀ । ಬೇರೆಯಿಲ್ಲ ಮುಕ್ತಿ ।
ನಿನ ನಲ್ಲ ಎಲ್ಲಾ ಆಗ ಒಂದ । ಒಂದ ನೂರೊಂದ । ಇದರ ಸವಿ ಮುಂದ
ತೋರುವರವಿಂದೋಂ ಸಚ್ಚಿದಾನಂದ
ಎಲ್ಲೆಲ್ಲೂ ಬೆಳಕು ಇರಲಾಕ ಆಳುತಿ ನೀ ಹಾಡಿ ।
ಒಡಲ ಮರಿಮಾಡಿ ॥

ಒಳ ಹೊರಗು ಬೆಳಕು ನಾನಿರಲು ಯಾಕ ನಿನ ಹಣತಿ ।
ಬಾರ ನನ ಗೆಣತಿ ॥

ತೆರಿತೆರೀ ನಿನ್ನ ಎದಿಕದಾ
ಬಂದಿತ ಹದಾ
ಕೇಳ ಈ ಪದಾ । ಕೇಳ ಈ ಪದಾ ।
ಗುರುದತ್ತ ಸಚ್ಚಿದಾನಂದ । ಸಚ್ಚಿದಾನಂದ ಸಚ್ಚಿದಾನಂದ । ಸಚ್ಚಿದಾ
ನಂದೋಂ ॥

—ಸಚ್ಚಿದಾನಂದ

ಒಳ ಹೊರಗ ಬೆಳಕು ನಾನಿರಲು ಯಾಕ ನಿನ ಹಣತಿ ।
ಬಾರ ನನ ಗೆಣತಿ ॥

# ೩೧. ನೀರೆ

ಮುಗಿಲ ಮೇಲ್ಬದಿಯಿಂದ,
ಬೆಟ್ಟಗಳ ತುದಿಯಿಂದ,
ನೆಲದ ಒಳ ಎದೆಯಿಂದ,
ಸುರಿಯುತಿದೆ, ಹರಿಯುತಿದೆ, ತೊರೆಯುತಿದೆ ನೀರು !

ಜೀವದಲ್ಲಿಹ ಪಾಪ,
ಜೀವಿಗಳ ಸಂಕೋಪ
ಜೀವನದ ಸಂತಾಪ
ಕುಚ್ಚುತಿದೆ, ಕುದಿಸುತಿದೆ, ಎಲೆ ನೀರೆ ! ಹೀರು.

ನಿನ್ನ ದರ್ಶನದಿಂದ
ನಿನ್ನ ಸ್ಪರ್ಶನದಿಂದ,
ನಿನ್ನ ಘರ್ಷಣದಿಂದ,
ಕಳೆ ಬಂತು, ಬೆಳೆ ಬಂತು, ಬರಿ ಬೀಳು ಹೊಲಕೆ.

ನಿನ್ನ ಹಸಿ ಎಲ್ಲೆಲ್ಲಿ,
ಜಗದ ಹಸಿರಲ್ಲಲ್ಲಿ,
ಹುಲ್ಲು ಹೂ ಕಲ್ಲಲ್ಲಿ,
ಅರಳುತಿದೆ, ಹೊರಳುತಿದೆ, ಉರುಳುತಿದೆ ನೆಲಕೆ.

ನೀನೊಂದೆ ಇಲ್ಲೆನ್ನು,
ಜಗದ ಮೈ ಹಣ್ ಹಣ್ಣು
ಅದರ ಎದೆ ಹುಣ್ ಹುಣ್ಣು,
ಅದು ಕೊರಗಿ ಸೊರಗುವದು, ನೀನದರ ದೇವ !

ನಿನ್ನ ಕರುಣೆಯು ಕಣ್ಣು,
ಸುರಿಸೆ ಕಂಬನಿಯನ್ನು,
ಕುಡಿದು ಅಂತಹದನ್ನು,
ಬೆಳಗುವದು, ತೊಳಗುವದು, ಈ ಜಗದ ಜೀವ !

# ೩೨. ಅನಂತ ಪ್ರಣಯ

ಉತ್ತರಧ್ರುವದಿಂ ದಕ್ಷಿಣಧ್ರುವಕೂ
ಚುಂಬಕ ಗಾಳಿಯು ಬೀಸುತಿದೆ.
ಸೂರ್ಯನ ಬಿಂಬಕೆ ಚಂದ್ರನ ಬಿಂಬವು
ರಂಬಿಸಿ ನಗೆಯಲಿ ಮಿಾಸುತಿದೆ.

ಭೂರಂಗಕೆ ಅಭಿಸಾರಕೆ ಕರೆಯುತ
ತಿಂಗಳು ತಿಂಗಳು ನವೆಯುತಿದೆ
ತುಂಬುತ ತುಳುಕುತ ತೀರುತ ತನ್ನೊಳು
ತಾನೇ ಸವಿಯನು ಸವಿಯುತಿದೆ

ಭೂವನ ಕಸುಮಿಸಿ ಪುಲಕಿಸಿ ಮರಳಿಸಿ
ಕೋಟಿ ಕೋಟಿ ಸಲ ಹೊಸಯಿಸಿತು.
ಮಿತ್ರನ ಮೈತ್ರಿಯ ಒಸಗೆ ಮಸಗದಿದೆ
ಮರುಕದ ಧಾರೆಯು ಮಸೆಯಿಸಿತು.

ಅಕ್ಷಿನಿಮಿಾಲನ ಮಾಡದೆ ನಕ್ಷ-
ತ್ರದ ಗಣ ಗಗನದಿ ಹಾರದಿದೆ.
ಬಿದಿಗೆಯ ಬಿಂಬಾಧರದಲಿ ಇಂದಿಗು
ಮಿಲನದ ಚಿನ್ಹವು ತೋರದಿದೆ.

# ೩೩. ಮರೆಯುವೆಯೋ, ಅರಿಯುವೆಯೋ !

ಎಲ್ಲಿ ಮರೆಯುವೆಯೋ ।
ಇಲ್ಲ ಅರಿಯುವೆಯೋ । ನಮ್ಮನ್ನಽ ॥ ಪ ॥
ಮನದನ್ನ, ಬಲುಚೆನ್ನ, ಮಿದುಚಿನ್ನ, ಸವಿಜೊನ್ನ,
ಬೆರೆಯುವಿಯೋ ನಮ್ಮನ್ನಾ ॥ ಅ. ಪ ॥

ಹೃದಯ ಪಂಜರದಲ್ಲಿ ಗಿಳಿಯಾದೆವೆಂದೆವು
ಮಧುರ ಮೋಹನ ತೇಜಾ । ರಾಜಾ ।
ನವರತ್ನ ಸಾರದ
ಭವದ ಕಾಂತಾರದಿ
ತೊರೆಯುವಿಯೋ ನಮ್ಮನ್ನಾ ॥ ೧ ॥

ಮೊದಲ ಸೋಂಕಿಗೆ ಇನ್ನೂ ನೆನವು ನವಿರಾಗುತಿದೆ
ಮದನ ಸುಂದರರೂಪಾ । ಭೂಪಾ ।
ಯುಗ ಆಗಿಹೋದವು,
ನಗೆಗೂಡಿ ಮತ್ತೊಮ್ಮೆ
ಕರೆಯುವಿಯೋ ನಮ್ಮನ್ನಾ ॥ ೨ ॥

ಇರುಳು ಮುಸುಕಲು, ಬಂದು, ನೆರಳು ನೆರೆದಿಹೆವಿಲ್ಲಿ.
ಕರುಣಿ ಬಾರೈ ಮಾರಾ । ನೀರಾ ।
ಚೆಲುವ ಗೊಂಬೆಗಳಲ್ಲಿ
ಒಲುಮೆಯುಸಿರನು ತುಂಬಿ
ಪೊರೆಯುವಿಯೋ ನಮ್ಮನ್ನಾ ॥ ೩ ॥

---

## ೩೪. ಎಲ್ಲಿರುವೆ ರಾಜಗಂಭೀರಾ !

ಎಲ್ಲಿರುವೆ ರಾಜಗಂಭೀರಾ—ನೀರಾ || ಪ ||

ಹಾಳು ದೇಗುಲದಲ್ಲಿ ಗಾಳಿ ಗೋಳಿಡುವೊಲು
ಉಸಿರಿಡುತಿದೆ ಜೀವಾ,
ಕಲ್ಲುಗೋಡೆಯು ಕೂಡ ಸೊಲ್ಲುಗೊಡುತಲಿದೆ
ಎಲ್ಲಿರುವೆ ರಾಜಗಂಭೀರಾ—ನೀರಾ

ಬೆಳಕ ಬೇಡುತಲಿದೆ ಗಾಳಿ ಕಾಣದೆ ಬಾಡಿ
ಬಳ್ಳಿಯಾಗಿಹ ಜೀವಾ,
ಮಲ್ಲಿಗೆಯಾದೆದೆ ಮೊಗ್ಗೆಯಾಗಿಯೆ ಇದೆ,
ಎಲ್ಲಿರುವೆ ರಾಜಗಂಭೀರಾ—ನೀರಾ

ಮುಗಿಲ ಚಿಕ್ಕೆಗಳೆಲ್ಲಾ ಮೊಗ ಕೆಳಗೆ ಹಾಕಿವೆ
ನೀರ ನೆರಳೊಲು ಜೀವಾ,
ಅಲ್ಲಾಡುತಿವೆ—ಎನುತ 'ಅಮವಾಸೆ ಹರುಹಿದೆ'
ಎಲ್ಲಿರುವೆ ರಾಜಗಂಭೀರಾ—ನೀರಾ

ಕಾಣದ ವಸ್ತುವ ಕಾಣಬೇಕೆಂಬಾಸೆ
ಮಿತಿಯ ಮೀರಿದೆ ಜೀವಾ,
ನಲ್ಲ, ನೀರಡಿಸಿದೆ, ಕಾವೇರಿ ಆರಿದೆ
ಎಲ್ಲಿರುವೆ ರಾಜಗಂಭೀರಾ—ನೀರಾ

ತನ್ನ ಒಡವೆಯೆ ತನಗೆ ಎರವಾಗಿ ಹೊರತಾಗೆ,
ನಿರ್ಜೀವವೀ ಜೀವಾ,
ಇಲ್ಲಿ ರಂಭೆಯರೆಲ್ಲಾ ನಂಬಿ ಕುಳಿತಿಹರಲ್ಲೋ,
ಎಲ್ಲಿರುವೆ ರಾಜಗಂಭೀರಾ—ನೀರಾ

## ೩೫. ಅವರ್ಣನೀಯ ಅರ್ವಾಚೀನ ಸೌಂದರ್ಯ

ಕುರುಡಿರಲಿ ಮೆಳ್ಳಿರಲಿ ಕಪ್ಪು ಕನ್ನಡಕವಿರೆ
ನಯನಗಳನೇನು ಬಣ್ಣಿಸಲಿ ಮಣ್ಣು ?
ಏನು ತಲೆ ಬಣ್ಣಿಸಲಿ ತಿಗಳಿ ಮೇಯುವ ಹೊಲವ ?
ಕಲಸನ್ನು ಕಾಣವೇ ನನ್ನ ಕಣ್ಣು ?

ತುಟಿಗಳನು ಬಣ್ಣಿಸಲೆ ? ತುಂಬೆಲ್ಲ ತಂಬುಲವು.
ಹಲ್ಲುಗಳ ಬಣ್ಣಿಸಲೆ ? ನಿನ್ನವಹುದೊ ?
ಸಾರಣೆಯು ಕಾರಣೆಯು ಗಲ್ಲಗಳ ಬಣ್ಣಿಸಲೆ ?
ಆ ಬಣ್ಣನೆಯು ಏನು ನಿನ್ನದಹುದೋ ?

ಬಣ್ಣದಾ ಬೀಸಣಿಕೆ ಕೈಬೀಸಿ ನಡೆವಾಗ
ಕೈವಸ್ತ್ರವನ್ನು ಬಣ್ಣಿಸಲೆ ನಾನು ?
ಮೊಚ್ಚೆ ಮುಚ್ಚಿರಲಾಗಿ ಅಡಿಯಡಿಯ ಬಣ್ಣನೆಯು
—ರವಿಯಿರಲಿ ಕವಿಯಿರಲಿ—ಸಾಧ್ಯವೇನು ?

ಅಂಗಾಂಗ ವ್ಯಂಗವಿರಬಹುದು ಇರದಿರಬಹುದು ;
ವ್ಯಂಗ್ಯಕಾವ್ಯದ ಹಾಗೆ ನಿನ್ನ ಮಾಟ.
ನಿನ್ನ ಮೈಯನ್ನೆಲ್ಲ ನೀನೆ ಬಣ್ಣಿಸಿಕೊಂಡೆ,
ಬೇರೆ ಬಣ್ಣನೆ ಬರಿಯ ಬಣ್ಣದಾಟ.

# ೩೬. ನಾನೊಂದು ನೆನೆದರೆ

ನಾನೊಂದ ನೆನೆದರ ನೀನೊಂದ ನೆನೆಯುತಿ
ನನ್ನ ನಗಿಗ್ಯಾಕ ಮುನಿಯುತಿ
ಎಂದೆನಗ
ಬಿದ್ದಿತು ನೋಡು ಇತಿಮಿತಿ.

ಅರಸ ತೂಕದ ಹೆಣ್ಣಾ ಸರಸವ್ಯಾತಕಿನ್ನ
ವಿರಸವಾದೀತ ನನ ಮನಸು
ಮಬ್ಬಿಳಿದು
ಹರಿದು ಹೋಯಿತಾತ ಸವಿಗನಸು.

ಹಾಸಿಗಿ ಮಗ ಮಗ, ಮಂಚಽಕ ಝಗ ಝಗ
ನನ್ನ ಎದಿ ಮಾತ್ರ ಧಗ ಧಽಗ
ಉರಿದೀತು
ಹೊತ್ತಿತ ಬೆಂಕಿ ಹೊರ ಜಗಾ.

ಸವಿಸತ್ತ ತಂಬೂಲ ಸೊಪ್ಪಾತು ದವಡ್ಯಾಗ
ಅದರ ಸವಿರಸ ಕಹಿವಿಷ
ಆಗಿತ್ತ
ನುಂಗಲುಗಳಲು ಎದೆಯಿಲ್ಲ.

ಎಸ್ತ ಕನ್ನಡಿ ಹರಳು ಬೆಸ್ತುಕೂಡೀತೇನ ?
ಹಸ್ತ ಕರಳೀನ ಕುಡಿ ಚಿವುಟಿ
ಕಡೆಗೊಮ್ಮೆ
ನೊಸ್ತಿ ಎಂದಽರು ಫಲವೇನ ?

## ೩೭. ಮುಗ್ಧೆ

ನೀ ಮಳ್ಳ ಜಾತಿಯ ಹೆಣ್ಣು
ಬಿಟ್ಟ ಏನು ಮಣ್ಣು
ಇರತಿ ನಲ್ಲನ್ನ
ಸೂರ್ಯನ ಕೂಡ ಹೊತ್ತೇರಿ-
ಧಾಂಗ ನಿನ ಮಾರಿ
ನೀ ಸುರೇಪಾನಧಾಂಗ ತಿರುವತೀದಿ

ನಿನ ಮುಸುಕ ಕತ್ತಲೀಯೊಳಗ
ಹೊರಳಿ ಬೆಳ್ಬೆಳಗ
ಬಿಡತ ತಣ್ಣುಸಿರು.
ತಂಗಾಳಿಗುರುಳುವಿಬ್ಬನಿ
ನಿನ್ನ ಕಂಬನಿ
ನೀ ಸುರೇಪಾನಧಾಂಗ ಸುರಿಸತೀದಿ.

ನೀ ನೀರು ಬೇಡುವಾ ಬಳ್ಳಿ
ನೀರನಿಲ್ಲದಲ್ಲಿ
ಬದುಕು ಎಂತೇನs
ಹಿತ್ತಲಗಿಡವು ಮದ್ದಲ್ಲ
ನಿನ್ನ ಸದ್ದಿಲ್ಲ
ನೀ ಸುರೇಪಾನಧಾಂಗ ಸೊರಗತೀದಿ.

## ೩೮. ಪೋರಿ ಪೋರ

ಪೋರೀ ನೀನು, ನಾನು ಪೋರಾ
ಮಾರಿ ಕಣ್ಣಿಗೆ ಮರುಳರಾಗಿ
ನೆಚ್ಚಿ ಮೆಚ್ಚಿ ಕೂಡಿದ್ದೇವ ಽ
ಬೇರೆ ಇಲ್ಲಾ । ಇದ್ದರೆ —
ಶಿವನೆ ಬಲ್ಲಾ.

ಯಾಕ ? ಏನು ? ಎಲ್ಲಿಗಂತ ಽ
ನಾಕು ಮಾತು ಕೂಡಾ ನಾವು
ಒಬ್ಬರಿಗೊಬ್ಬರು ಆಗ ಽ
ಕೇಳಲಿಲ್ಲಾ । ಉತ್ತರಾ
ಹೇಳಲಿಲ್ಲಾ.

ಹೆಣ್ಣು ಮಣ್ಣು ಹಾಽಳಂತ ಽ
ಬಣ್ಣ ಕಡೆಬಾಳದಂತ ಽ
ಬಾಳುವೀ ಸುಳ್ಳಾಟಂತ ಽ
ಹೆದರಲಿಲ್ಲಾ । ಯಾರೂ
ಹೆದರಿಸಲಿಲ್ಲಾ.

ಆಡಿದ್ದೊಂದಽ ನೋಡಿದ್ದೊಂದಽ
ಹೂಡಿದ್ದೊಂದಽ ಕೂಡಿದ್ದೊಂದಽ
ಬೇರೆ ಮಾತು ನನಗ ನಿನಗಽ
ಗೊತ್ತಽ ಇಲ್ಲಾ । ಗುಟ್ಟು
ಶಿವನೆ ಬಲ್ಲಾ.

## ೩೯. —ಗೆ

ಆಕೃತಿಯ ನಡಗಿಸಿಹ ಆಕಾರವೇ ! ಏಕೆ ಮಿಸುಗುಡದ-
ಲಿಂತು ನಿಂತೆ
ಪ್ರಾಕೃತಗೆ ತಿಳಿಯದೀಮಾತು ! ನಾಗರ ರಮಣಿ ಕಣ್ಸನ್ನೆ
ಗೈಯುವಂತೆ.

ದೂಡುವಿಯೊ ? ಹೊರಟಿಹೆನೊ ಗುಡಿಯಿದ್ದಯೆಡೆಗೆಂದು
ಮೆಟ್ಟಿಲುಗಳನ್ನು ಏರಿ ?
ಮೂಡಿತ್ತು ಮನದಲ್ಲಿ ಕಾಮಕಲುಷಿತಪ್ರೇಮ
ಹೀಗೇಕೊ ತಿಳಿಯೆ, ನಾರೀ ?

ಒಲಿಯದೇ ನಲ್ಲೆ ! ನೀನಿಂತು ಒಲಿದಾಡುವಿಯೊ,
ಅನ್ನುವಿಯೊ 'ಒಲ್ಲೆ, ಒಲ್ಲೆ'.
ಬಲದಿಂದ ಬಾಯ್ಬದಿಗೆ ಬಂದದ್ದು ಸಲ್ಲದಿದು—ಬಲ್ಲೆನೇ
ಬಲ್ಲೆ ಬಲ್ಲೆ.

ಮುದ್ದುಂಡ ದುಂಡುಮೊಗ—ಮುದ್ದು ಮುದ್ದಿನ ಹೊಂಡ
ಮುದ್ದನ್ನು ಬೀರ್ವುದಲ್ಲೇ !.
ಮುದ್ದಿನಿಂ ಮುಂದುವರಿದಿಂದು ಮುದ್ದಿಡ ಬಂದೆ ಮುದ್ದನ್ನ-
ದೇಕೆಯೊಲ್ಲೆ ?

ಕಾಮುಕನು ನಾನೆಂದು—ಪ್ರೇಮದೇವತೆ ನೀನು—
ಬೆಂಬದಿಗೆ ನಿಂತೆ—ಬಾಗಿ
ರಾಮಣೀಯಕರೂಪ ಮುಂಬದಿಗೆ ಬಂದಿರಲು
ಉಳಿಯುವೆನೆ ಕಾಮಿಯಾಗಿ ?

# ೪೦. ನೀ ಹೀಂಗ ನೋಡಬ್ಯಾಡ ನನ್ನ

ನೀ ಹೀಂಗ ನೋಡಬ್ಯಾಡ ನನ್ನ
ನೀ ಹೀಂಗ ನೋಡಿದರ ನನ್ನ ತಿರುಗಿ ನಾ ಹ್ಯಾಂಗ ನೋಡಲೇ ನಿನ್ನ ॥ ಪ ॥

ಸಂಸಾರ ಸಾಗರದಾಗ, ಲೆಕ್ಕವಿರದಷ್ಟು ದುಃಖದ ಬಂಡಿ
ನಾ ಬಲ್ಲೆ ನನಗೆ ಗೊತ್ತಿಲ್ಲದಿದ್ದರೂ ಎಲ್ಲಿ ಆಚೆಯಾ ದಂಡಿ
ಮಲಗಿರುವ ಕೂಸು ಮಲಗಿರಲಿ ಅಲ್ಲಿ, ಮುಂದಿನದು ದೇವರ ಚಿತ್ತ
ನಾ ತಡೀಲಾರೆ ಅದು, ಯಾಕ ನೋಡತೀ ಮತ್ತ ಮತ್ತ ನೀ ಇತ್ತ?

ತಂಬಲಃ ಹಾಕದಃ ತುಂಬ ಕೆಂಪು ಗಿಣಿಗಡಕ ಹಣ್ಣಿನ ಹಾಂಗ
ಇದ್ದಂಥ ತುಟಿಯು ಬಣ್ಣೆತ್ತ ಹಾರಿತು? ಯಾವ ಗಾಳಿಗೆ, ಹೀಂಗ
ಈ ಗದ್ದ, ಗಲ್ಲ, ಹಣಿ, ಕಣ್ಣು, ಕಂಡು ಮಾರೀಗೆ ಮಾರಿಯು ರೀತಿ
ಸಾವನಃ ತನ್ನ ಕೈ ಸವರಿತಲ್ಲಿ, ಬಂತೆನಗ ಇಲ್ಲದ ಭೀತಿ.

ಥಾರೀಲೆ ನೆನೆದ ಕೈ ಹಿಡಿದೆ ನೀನು, ತಣ್ಣಃಗ ಅಂತನ ತಿಳಿದು
ಬಿಡವೊಲ್ಲಿ ಇನ್ನುನೂ, ಬೂದಿಮುಚ್ಚಿದ ಕೆಂಡ ಇದಂತ ಹೊಳೆದು
ಮುಗಿಲಃನ ಕಪ್ಪರಿಸಿ ನೆಲಕ ಬಿದ್ದರ ನೆಲಕ ನೆಲಿ ಎಲ್ಲಿನ್ನಃ
ಆ ಗಾದಿಮಾತು ನಂಬಿ, ನಾನು ದೇವರಂತ ತಿಳಿದಿಯೇನ ನೀ ನನ್ನ.

ಇಬ್ಬನ್ನಿ ತೊಳೆದರೂ ಹಾಲು ಮೆತ್ತಿದಾ ಕವಳಿಕಂಟಿಯಾ ಹಣ್ಣು
ಹೊಳೆ ಹೊಳೆವ ಹ್ಯಾಂಗ ಕಣ್ಣಿರುವ, ಹೆಣ್ಣು, ಹೇಳು ನಿನ್ನವೇನ ಈ ಕಣ್ಣು?
ದಿಗಿಲಾಗಿ ಅನ್ನತದ ಜೀವ ನಿನ್ನ ಕಣ್ಣಾರೆ ಕಂಡು ಒಮ್ಮಿಗಿಲಃ
ಹುಣ್ಣಿವೀ ಚಂದಿರನ ಹೆಣಾ ಬಂತೊ ಮುಗಿಲಾಗ ತೇಲತ ಹಗಲ!

ನಿನ ಕಣ್ಣಿನ್ಯಾಗ ಕಾಲೂರಿ ಮಳೆಯು, ನಡ ನಡಕ ಹುಚ್ಚನಗಿ ಯಾಕ
ಹನಿ ಒಡೆಯಲಿಕ್ಕೆ ಬಂದಂಥ ಮೋಡ ತಡಥಾಂಗ ಗಾಳಿಯು ನೆವಕ
ಅತ್ತಾರೆ ಅತ್ತುಬಿಡು, ಹೊನಲು ಬರಲಿ, ನಕ್ಕ್ಯಾಕ ಮರಸತೀ ದುಕ್ಕ?
ಎವೆಬಡಿಸಿ ಕೆಡವು, ಬಿರಿಗಣ್ಣು ಬ್ಯಾಡ, ತುಟಿಕಚ್ಚಿ ಹಿಡಿಯದಿರು ಬಿಕ್ಕ.

## ೪೧. ನಾನು ಬಡವಿ

ನಾನು ಬಡವಿ ಆತ ಬಡವ
ಒಲವೆ ನಮ್ಮ ಬದುಕು
ಬಳಸಿಕೊಂಡೆವದನೆ ನಾವು
ಅದಕು ಇದಕು ಎದಕು.

ಹತ್ತಿರಿರಲಿ ದೂರವಿರಲಿ
ಅವನೆ ರಂಗಸಾಲೆ
ಕಣ್ಣು ಕಟ್ಟುವಂಥ ಮೂರ್ತಿ
ಕಿವಿಗೆ ಮೆಚ್ಚಿನೋಲೆ.

ಚಳಿಗೆ ಬಿಸಿಲಿಗೊಂದೆ ಹದನ
ಅವನ ಮೈಯು ಮುಟ್ಟಿ
ಅದೇ ಗಳಿಗೆ ಮೈಯು ತುಂಬ
ನನಗೆ ನವಿರುಬಟ್ಟೆ.

ಆತ ಕೊಟ್ಟ ವಸ್ತು ಒಡವೆ
ನನಗೆ ಅವಗೆ ಗೊತ್ತು
ತೋಳುಗಳಿಗೆ ತೋಳಬಂದಿ
ಕೆನ್ನೆತುಂಬ ಮುತ್ತು.

ಕುಂದು ಕೊರತೆ ತೋರಲಿಲ್ಲ
ಬೇಕು ಹೆಚ್ಚಿಗೇನು ?
ಹೊಟ್ಟೆಗಿತ್ತ ಜೀವ ಫಲವ
ತುಟಿಗೆ ಹಾಲು ಜೇನು.

## ೪೨. ಅಷ್ಟು ಪ್ರೀತಿ ಇಷ್ಟು ಪ್ರೀತಿ

ಅಷ್ಟು ಪ್ರೀತಿ ಇಷ್ಟು ಪ್ರೀತಿ—
ಎಣಿಸಿ ಕಷ್ಟ ಬಡದಿರು
ಒಲಿದು ಒಲಿಸಿ ಸುಖವಿರು
ಎಷ್ಟೆಯಿರಲಿ ಅಷ್ಟೆ. ಮಿಗಿಲು—ತನ್ನ ಕಿರಣ ತನಗೆ ಹಗಲು;
ಉಳಿದ ಬೆಳಕು ಕತ್ತಲು.
ಬಿಟ್ಟಲ್ಲಿಯೆ ಬೀಡು ಮತ್ತೆ ಆಡಿದಲ್ಲಿ ಅಂಗಳು
ಉಳಿದ ಲೋಕ ಹಿತ್ತಲು.

ಮುತ್ತಿನೆಕ್ಕಸರವನಿಕ್ಕೆ
ಮುದ್ದಿಗೆ ಕಳೆಕಟ್ಟಿತೆ ?
ತೊಯ್ದು ಎವೆಗೆ ಮುದ್ದನಿಡಲು
ಮುದ್ದಿಗೆ ಅದು ತಟ್ಟಿತೆ ?
ಕುದಿದು ಬಂದ ಕಂಬನಿಯಲು
ಕಂಪು ಬರದೆ ಬಿಟ್ಟಿತೆ ?
ಮುತ್ತುರತುನ ಹೊನ್ನು ಎಲ್ಲ
ಕಲ್ಲು ಮಣ್ಣ ವೈಭವಾ
ಎಲವೊ ಹುಚ್ಚು ಮಾನವಾ
ಒಂದು ಷೋಕು—ಬರಿಯ ಶ್ಲೋಕು
ಬದುಕಿನೊಂದು ಜಂಬವು
ಒಲವೆ ಮೂಲ ಬಿಂಬವು.

ಸಪ್ತ ನಾಕ ಸಪ್ತ ನರಕ
ಅದರ ಬೆಳಕು ಕತ್ತಲು
ಮನ್ವಂತರ ತನ್ವಂತರ
ಅದರ ಕೋಟೆಕೊತ್ತಲು

ಸಿಂಹಾಸನವೇರಿ ಕುಳಿತೆ
ತೊಡೆಗೆ ತೊಡೆಯು ಹೆಚ್ಚಿದೆ
ಸರಿಯೆ, ಒಲಿದ ತೋಳಿಗಿಂತ
ಅದರೊಳೇನು ಹೆಚ್ಚಿದೆ ?
ಎದೆಯ ಕಣ್ಣು ಮುಚ್ಚಿಕೊಂಡು
ಏಕೊ ಏನೊ ಮೆಚ್ಚಿದೆ
ಮರದ ಅಡಿಗೆ ಗುಡಿಸಲಿರಲಿ
ಅಲ್ಲೆ ಒಲವು ಮೆರೆಯದೇ
ನಲಿವು ಮೇರೆವರಿಯದೇ ?

---

## ೪೩. ದೀಪ

ಬಂತಿದೊ ಶೃಂಗಾರಮಾಸ
ಕಂತು ನಕ್ಕ ಚಂದ್ರಹಾಸ
ಎಂತು ತುಂಬಿತಾಽಕಾಶ
ಕಂಡವರನು ಹರಸಲು.

ಕಿರಿಚೆರಳಲಿ ಬೆಳ್ಳಿಹರಳು
ಕರಿ ಕುರುಳೊಳು ಚಿಕ್ಕೆ ಅರಳು
ತೆರಳಿದಳಿದೊ ತರಳೆ ಇರುಳು
ತನ್ನರಸನನರಸಲು.

ಗಂಗೆ ಯಮುನೆ ಕೂಡಿ ಹರಿದು
ಸಂಗಮು ಜಲ ಬಿಳಿದು ಕರಿದು
ತಿಂಗಳ ನಗೆ ಮೇರೆವರಿದು
ಜೇರೆ ಮಿರುಗು ನೀರಿಗು.

ಪಂಥದಿಂದ ಮನೆಯ ತೊರೆದು
ಪಾಂಥ ನೆನೆದನತ್ತುಕರೆದು :
ಇಂಥ ಸಮಯು ಬೇರೆ ಬರದು
ದಂಪತಿಗಳಿಗಾರಿಗು !

ನಾನು ನೀನು ಜೊತೆಗೆ ಬಂದು
ಈ ನದಿಗಳ ತಡಿಗೆ ನಿಂದು
ಸಾನುರಾಗದಿಂದ ಇಂದು
ದೀಪ ತೇಲಿಬಿಟ್ಟೆವೇ–
ದೀಪ ತೇಲಿಬಿಟ್ಟೆವು.

# ೪೪. ಮನದನ್ನೆ

ಆಡದಿರು ಮನದನ್ನೆ
ಎನಗೆ ಇದಿರಾಡದಿರು.
ವಾದಕ್ಕೆ ಬೇಸತ್ತು
ಮರ್ಮಘಾತಕೆ ಸತ್ತು
ಉಳಿದುಬಂದೆ ;
‘ ಎಲ್ಲಿಹುದು ತಿಳಿವಳಿಕೆ
ಜೀವನದ ಸಲುವಳಿಕೆ ’
ಎಂದು ತಳಮಳಿಸಿ ನೀರಡಿಸಿ ಬಂದೆ;
ಹೇಳುತಿರೆ ‘ ಹೂಂ ’ ಎನ್ನು
ಒರೆದು ನೋಡೀ ಹೊನ್ನು
ಹೊಳೆದ ಗೆರೆ ಬಣ್ಣಗಳ ತಿಳಿದು ನೋಡು
ಎದೆಯ ಆಳದ ಮಾತನಳೆದು ಆಡು ;
ಹೀಗೆನಲು ಹಾಗೆಂದು
ಬೆಂದ ಹೆಣವನೆ ಕೊಂದು
ಭೂತಲೀಲೆಯಲೀಗ ತೊಡಗಬೇಡ ;
ಆಡಗಿ ಅಡಕದೆ ಮನವ ಮಡಗಬೇಡ
ನಿನ್ನ ತಿಳಿವನು ಹಣಿಸು
ನಿನ್ನ ಹೊಟ್ಟೆಯನುಣಿಸು
ಇದಿರಾಡದಿರು ಗೆಳತಿ ನೀನು ಕೂಡ
ಹೃದಯವನು ರಣರಂಗ ಮಾಡಬೇಡ.

*　　*　　*　　*

ವಾದಕ್ಕೆ ಪ್ರತಿವಾದ
ಸಾಕು ವಾದವಿವಾದ

ಜೀವ ಸಂವಾದಕ್ಕೆ ಹಸಿದು ಬಂದೆ
ನೀಡು ಸಿಪ್ಪೆಯ ಸುಲಿದು ತಿಳಲನೊಂದೆ.
ಜೀವ ಜೀವಾಳದಲಿ
ಹೃದಯಾಂತರಾಳದಲಿ
ಇಳಿದು ನೋಡು
ಬಗೆಯ ಬಾನ್‌ಬಯಲನ್ನು
ಅಳೆದು ನೋಡು.
ಹಚ್ಚಿ ರೆಕ್ಕೆಗೆ ರೆಕ್ಕೆ ಹಾರಿ ನೋಡು.
ಈಸಾಡು ತೇಲಾಡು ಮುಂದೋಡು ಮೇಲಾಡು
ಅಣಕ ಮೂದಲಿಕೆಯಲಿ ಕಟಕಬೇಡ
ಕೆನ್ನೀರ ಕೆಸರನ್ನು ಕಲಕಬೇಡ.
ಯುಗ ಯುಗದ ಕಣ್ಣೀರು
ಎದೆಯೊಳಿದೆ ಮುನ್ನೀರು
ಅದರ ತೆರೆಗಳ ತೆರೆದು ಮುಳುಗಿ ನೋಡು
ನೆಲೆಯಿರದ ನೆಲವನ್ನು ಬಗೆದು ನೋಡು.
ನಾಗಲೋಕದ ರತ್ನ-
ರಾಶಿ ತರುವ ಪ್ರಯತ್ನ
ವ್ಯರ್ಥ ಆಯಾಸದಲಿ ಮಾಡಬೇಡ
ನನ್ನದಿದು ನಿನ್ನದದು
ಎಂದು ಎರಡನು ಬಗೆದು
ಪಾಲುಗಾರಿಕೆಗಾಗಿ ಹೆಣಗಬೇಡ
ನಿನಗೆ ನೀರಿಲ್ಲೆಂದು ಒಣಗಬೇಡ.
ನಿನ್ನ ಮೈಸಿರಿಯೇನು ?
ನನ್ನ ಐಸಿರಿಯೇನು ?
ಒಂದುಸಿರೆ ತಾನಾಡಿದಂತೆ ಇಹುದು
ಹೀಗಿರಲು ಬಾಳುದ್ದ ಬದುಕಬಹುದು.

ಗಾಳಿಮಾತುಗಳೆಂದು, ಉಸಿರನೆಳೆದಾಡಿದರೆ
ಪ್ರಾಣವೇ ಬರಿ ಗಾಳಿಯಾಗಲಹುದು.

*　　*　　*　　*

ಗಂಡು ದರ್ಪವ ಹರಿದು
ಬಿರುಸು ಬಿಂಕವ ತೊರೆದು
ತೋಳ ತೊಟ್ಟಿಲ ಮಗುವು ಆಗಿ ಬಂದೆ.
ಗೊಂಬೆಯಾಡಿಸಿದಂತೆ ಆಡಿಸೆಂದೆ
ನಿನ್ನ ತಾಯ್ತನದ ಸ್ಥೈರಣೆಯ ವಿತರಣೆ ಬೇಕು.
ನಿನ್ನ ತಾಳ್ಮೆಯ ಸ್ಪೈಪಿನೊಂದು ಕರುಣೆಯು ಸಾಕು.
ಮಲಗಿರುವ ಹಾವನ್ನು
ಕೆಣಕಬೇಡ
ಕಚ್ಚಿ ವಿಷ ಕಾರಿದರೆ
ತಿಣಕಬೇಡ.
ನಗೆಯ ನಾಗಸ್ವರವ
ಅದರದೇ ತರ ತರವ
ಹೆಚ್ಚಿ ನೋಡು
ನನ್ನೆದೆಯ ಒಲೆದಾಟ
ನನ್ನ ತಲೆದೂಗಾಟ
ಮೆಚ್ಚಿ ನೋಡು.
ಸಿಡುಕಿರಲಿ ಮಿಡುಕಿರಲಿ
ಯಾವುದೇ ಒಡಕಿರಲಿ
ಅದರ ಸಪ್ಪಳವನ್ನು ಮಾಡಬೇಡ
ಹಾಳು ರಾಗವ ಮತ್ತೆ ಹಾಡಬೇಡ
ಅದಕಾಗಿ ಜೀವದುಸಿರೆತ್ತಬೇಡ.
ಹುಟ್ಟು ಹುಸಿನಗೆಯಲ್ಲಿ
ತಿಳಿದವರ ಬಗೆಯಲ್ಲಿ

ನನ್ನ ಜೀವನಕೆ ಬೆಳಕಿತ್ತು ನೋಡು.
ಮುನಿದರೂ ಕ್ಷಮಿಸುವೆನು
ಕೂಸಿನೊಲು ರಮಿಸುವೆನು
ಅಂಗೈಯ ಹುಣ್ಣಿನಾರೈಕೆ ಕೊಡುವೆ
ಕೂಸೆಂದು ಹುಡುಗನೊಲು ಮುತ್ತನಿಡುವೆ.
ನಿನ್ನ ಕಣ್ಣೀರ್ಮುತ್ತು
ನನ್ನ ಕೊರಳಿನ ಸುತ್ತು
ಆಭರಣವೆಂದು ಮೆರೆದಾಡುತಿರುವೆ
ಸ್ವರ್ಗ ನರಕಕ್ಕೆ ಕರೆದಲ್ಲಿ ಬರುವೆ.
ಇದಿರಾಡದಿರು ಮತ್ತೆ
ಎದಿರಾಡದಿರು ಇತ್ತ
ಮಾಡದಿರು ಬಾಳನ್ನು ಬೇಳೆಯಂತೆ
ಕೂಡಿರಲಿ ಬಾಳು ಇಡಿಗಾಳಿನಂತೆ.
ನಾನೆಂದರೂ ಒಂದೆ
ನೀನೆಂದರೂ ಒಂದೆ
ಹೊಂದುಗೂಡಿಕೆ ಇರದ ಜನಕೆ ನೊಂದೆ
ನೀನು ನನ್ನವಳೆಂದು ಬಳಿಗೆ ಬಂದೆ
ಹೊಸ ಹುಟ್ಟು ಬರುವದಿದೆ ಇನ್ನುಮುಂದೆ
ಆಗೋಣ ಆ ಜಗದ ತಾಯಿತಂದೆ.

# ೪೫. ಹೆಣದ ಹಿಂದೆ

ನಾಲ್ಕು ಮಂದಿ ಹೆಗಲಮೇಲೆ
ಮುಂದೆ ಹೆಣವು—ಹಿಂದೆ ಹೆಣ್ಣು
“ ಬಿರಿಯೆ ತಾಯಿ ನಿನ್ನ ಎದೆಯ
ಬಾಗಿಲನ್ನು ತೆರೆಯೆ ತಾಯಿ ”
ಎನ್ನುವಂತೆ ಅಡಿಗಡಿಗೂ
ನೆಲವನಮುಕಿ ನೋಡುತಿಹಳು,
ಓಡುತಿಹಳು ಗಾಳಿ ನೇರಿ-
ದಂತೆ ಒಮ್ಮೆ ಹೆಣದ ಹಿಂದೆ.
ಎರಡು ಕಣ್ಣು ಮುಚ್ಚಿಕೊಂಡಿ-
ನ್ನೊಂದು ತೆರೆಯಲೆಂದು
ಜಾನಿಸುವಳೊ ಎಂಬ ಹಾಗೆ
ಮುಗಿಲನೊಮ್ಮೆ ದಿಟ್ಟಿಸುವಳು—
ಹಾಗೆ ಮಾಡಬೇಡ ತಾಯಿ
ಝಲ್ಲೆನೆ ನೆಲ ನಡುಗುತಿಹುದು.

ಮದುವೆಯೊಂದು ಹಬ್ಬವೆಂದು
ಹಿಡಿಯ ಬಂದ ಕೈಯ ಹಿಡಿದ
ಹೆಣ್ಣು ಕೈಯ ಬಿಟ್ಟುಕೊಟ್ಟು
ಬಾಳ ನೀರ ನಡುವೆ ಹೊರಟ
ನತ್ತು ಗೆದ್ದ ವೀರನವನು.
ಶೋಭಾನೆ ಹೇಳಿದವರು
ಅಕ್ಕಿ ಕಾಳ ತೂರಿದವರು
ಅವನ ಹೆಸರ ಕೇಳಿದವರು
ಎಡಕೆ ಬಲಕೆ ಹಾಯಲಿಲ್ಲ.

ಅನ್ನವನ್ನು ಚಿನ್ನಗೊಳಿಸಿ
ಉಣ್ಣ ಬರದ ಹಾಗೆ ಮಾಡಿ;
ಮನದ ಮನೆಗೆ ಮುಳ್ಳ ಚುಚ್ಚಿ—
ಬೆಳಕಿನೊಂದ ಕಣ್ಣ ಕಳೆದು ;
ಗಾಳಿಬಟ್ಟೆಯನ್ನು ಕಟ್ಟಿ
ಪ್ರಾಣ ನಿಷ್ಪ್ರಾಣಗೈದು ;
ಎಲ್ಲ ದೇವರನ್ನು ಬಯ್ದು
ಸ್ವರ್ಗವಾಸಿಗಳನು ಮಾಡಿ ;
ಪಾತಾಳದಿಂದ ನರಕ-
ವನ್ನು ಎತ್ತಿ ಉದ್ಧರಿಸಿ ;
ಶಾಂತಿಪಾಠ ಹೇಳುವವರೆ
ಅತ್ತ ಇತ್ತ ಸುತ್ತು ಮುತ್ತು.
ಇದ್ದವರಿಗೆ ಇಹುದು ಎಲ್ಲ
ಇಲ್ಲದವರಿಗಿಲ್ಲೆ ಇಲ್ಲ.
ತನ್ನ ದುಃಖ ನುಂಗಿಕೊಂಡು
ಅವಳು ಹಸಿವ ಕಳೆಯಬೇಕು.
ತಾನೆ ಅತ್ತು ಹಾಡಿಕೊಂಡು
ತನ್ನ ತಾನು ರಮಿಸಬೇಕು.
ಹೆಣಕೆ ಉಂಟು ಮಸಣ ಬಟ್ಟೆ,
ಜನಕೆ ತಮ್ಮ ಮನೆಯ ಹಾದಿ,
ಅವಳಿಗಾವ ಕೆರೆಯು ದಾರಿ ?
ಹೆಣ್ಣ ಪಾಡು ನಾಯಿ ಪಾಡು
ಎಂದುದೆಷ್ಟು ಸಲವೊ ಏನೊ !
ಸುಟ್ಟು ಬರಲಿ ಹಾಳು ಹುಟ್ಟು
ಬೇಡ ಬೇಡ ಹೆಣ್ಣು ಜನ್ಮ
ಬಯ್ದುಕೊಂಡುದೆಷ್ಟು ಸಲವೊ !

ಹೊಟ್ಟೆಯಿಂದ ಬಂದ ಒಂದು
ಮರುಳು ಕರುಳು ಇಲ್ಲದಿದ್ದ-
ರೆಷ್ಟು ಒಳಿತು ಆಗುತಿತ್ತು !
ಇಲ್ಲದಿರುವದೊಂದೆ ಒಳಿತು.
ಇದ್ದು ಸುರಿದುಕೊಂಡುದೇನು ?
ಗಂಡು ಹೆಣವು—ಹೆಣ್ಣು ಅಳುವು,
ಬಾಳು ಕಾಡು—ಕೂಸು ಪಶುವು,
ಮುಂದೆ ಹೇಗೆ ಮುಂದೆ ಹೇಗೆ
ಒಂದೆ ಒಂದು ಮಾತು ಮತ್ತೆ
ಮತ್ತೆ ಮತ್ತೆ ಒಂದೆ ಮಾತು
ಒಂದೆ ಮಾತು ಒಂದೆ ಚಿಂತೆ
ಹೆಣ್ಣು ಮನದ ಕಣ್ಣು ಮುಂದೆ
ಬಂದು ಅವಳ ಕನಲಿಸುವದು
ಹೊಟ್ಟೆಕಿಚ್ಚು ಹೊತ್ತಿಸುವದು
"ತುಳಿದು ಬಿಡುವೆ ಬಾಳನೆಲ್ಲ"
ಎಂಬ ಸೊಲ್ಲ ಹುಟ್ಟಿಸುವದು.
ಆನಂದ ಸ್ಪಂದದಿಂದ
ಹುಟ್ಟಿಬಂದ ಸೃಷ್ಟಿಯಿಂದ
ಇಂಥ ಮಾತು ಹುಟ್ಟಬೇಕೆ ?

ಕಾಳಿಯಂತೆ ಕೇಣಗೊಂಡು
ಶಿವನ ಎದೆಯ ತುಳಿಯಲೆಂದು
ಅಡಿಯನೆತ್ತಬೇಡ ತಾಯಿ !
ಬಂದುದೆಲ್ಲದಕ್ಕೆ ನೀನು
ತಲೆಯನೊಡ್ಡದಿರಲು ನಮಗೆ
ನಿಲ್ಲ ನೆಲೆಯು ಎಲ್ಲು ಇಲ್ಲ.

ನಮ್ಮ ಕಾಲ ಹಾದಿ ನೀನು
ನಿನ್ನ ತುಳಿವೆವೆಂದರೇನು ?
ನಿನ್ನ ಮೈಯ ಮಣ್ಣು ನಮ್ಮ
ಮನೆಗಳನ್ನು ಕಟ್ಟುತಿಹುದು,
ನಿನ್ನ ಹೊಟ್ಟೆ ಹಣ್ಣು ನಮ್ಮ
ಆಸೆ ಹಸಿವ ತಣಿಸುತಿಹುದು,
ಕಾದ ಮೈಗೆ ತಂಪು ನೀನು
ಸೋತ ಮೈಗೆ ಕಾವು ನೀನು,
ಅಳಿದ ಮೈಯ ಮಣ್ಣು ಮಾಡಿ
ಮತ್ತೆ ಮೂರ್ತಿ ಕಟ್ಟಿ ತರಲು
ಶಿಲ್ಪಶಾಲೆ ನಿನ್ನ ಬಸಿರು.
ಭೂಮಿತಾಯಿಯಂತೆ ನಿನಗೆ
ತಾಳ್ಮೆಯೊಂದೆ ಬಾಳ್ಮೆಯಹುದು.
ಬಾಳು ಮೊದಲು ಬಾಳು ಕಡೆಯು
ನೀನು ನಮ್ಮ ಬಾಳುವೆಡೆಯು.
ನೀನು ನರಳಬೇಡ ತಾಯಿ
ನುಂಗು ನುಂಗು ಬಂದ ದುಃಖ.

ನಿನ್ನ ಬಿಸಿಯ ಉಸಿರ ಹಬೆಗೆ
ಸಿರಿಯ ಕುರುಳು ಕೊಂಕಿಹೋಯ್ತು,
ನೀನು ನರಳಿ ಮಿಡುಕುತಿರಲು
ನರಸವೀಣೆ ವಿರಸವಾಯ್ತು,
ನಿನ್ನ ತಾಪದುರಿಗೆ ತಾನೆ
ಸತಿಯ ಮೈಯು ತಣ್ಣಗಾಯ್ತು.
ಮಾಯೆ ಇಳೆಗೆ ಇಳಿವಳೆಂದು
ಮೊನ್ನೆ ಮುಗಿಲು ಗುಡುಗುತಿತ್ತು,

ಹೆಣ್ಣು ಹೊತ್ತು ಬರುವದೆಂದು
ನಿನ್ನೆ ಗಾಳಿ ಹಾಡುತಿತ್ತು,
'ಸ್ತ್ರೀಯೆ ಮನುವು, ಸ್ತ್ರೀಯ ಮನುವು'
ಇಂದು ರವಿಯು ಆಡುತಿರುವ;
ಹೊಳೆಗಳಲ್ಲಿ ಹರಿಯುತಿಹುದು.
ಹುಡಿ ಹುಡಿಯೂ ನುಡಿಯುತಿಹುದು.
ಮತ್ತೆ ಮತ್ತೆ ಮಲಗಿಬಿಡುವ
ಅತ್ತಮೇಲೆ ಕಣ್ಣು ತೆರೆವ
ದೇವನೆಂಬ ತಂದೆಯಿನ್ನು
ಮುಗಿಲಿನಾಚೆಯಿಂದ ಬರುವ
ಜಂಭ ಜಂಬರಂಗಳಿಲ್ಲ.
ಭೂಮಿದೇವಿ ಗರ್ಭದಿಂದ
ಇನ್ನು ಅವನು ಹುಟ್ಟಿ ಬರುವ;
ಅವಳ ಹೊಟ್ಟೆಯಿಂದ ಬಂದು
ದೇವನೆಂಬ ಹೆಸರ ಪಡೆವ.
ನೆಲದ ಮಕ್ಕಳಿನ್ನು ಮೇಲೆ
ದಿವ್ಯ ಲೋಕಗಳನು ಕಟ್ಟಿ
ಪಡೆವ ಪದವ ಇಲ್ಲೆ ಪಡೆವು,
ದೇವ ಗೀವ ಭೇದಭಾವ
ಅಳಿಸಿಬಿಡುವರೆಂಬ ಸುದ್ದಿ
ಬುದ್ಧ ಲೋಕದಲ್ಲಿ ಕೂಡ
ಎದ್ದು ನಿಂತು ಧ್ವಜದ ಹಾಗೆ
ಸಾರುತಿತ್ತು, ಬೀರುತಿತ್ತು.
ಆದಿ ಮಾಯೆ, ತಾನೆ ತಾಯಿ–
ಯಾಗಿ ಇಂದು ಬರುವಳೆಂದು
ಹೇಳುತಿತ್ತು, ಮೂರು ಲೋಕ

ಕಿವಿಯುಗೊಟ್ಟು ಕೇಳುತಿತ್ತು.
ಬನದ ತಂಪು ಕಂಪು ಬಾರ
ಮುಗಿಲ ಶಾಂತಿ ಕಾಂತಿ ಬಾರ
ಇರುಳೆ ಕಾಡಿಗೆಯನು ತಾರ,
ಸಂಜೆಗೆಂಪು ಗಾಳಿಯಿಂಪು
ಸಿಂಗಾರವಗೊಳಿಸ ಬಾರ,
ಭೂಮಿತಾಯಿ ಏಳಲಿಹಳು
ತನ್ನ ದಿವ್ಯ ಲೀಲೆಗೆ.

## ೪೬. ಬೆಳುದಿಂಗಳ ನೋಡಽ

ಬೆಳುದಿಂಗಳ ನೋಡ ಽ
ಬೆಳುದಿಂಗಳ ನೋಡು || ಪ ||

ದನಕರದ ಕಾಲಿನ ಧೂಳಿ
ಸಂಜೆಯ ಹೋಳಿ
ಮುಗಿಲ ಮುಟ್ಟೈಽದ
ಮುಗಿಲ ಮುಟ್ಟಿದ
ಗೋಧೂಳಿಲಗ್ನಕ ಇತ್ತ
ಕೈಯ ಹಿಡಿದಿತ್ತ
ಕೈಯ ಹಿಡಿದಿತ್ತ ಽ
ಚಂದ್ರಿಕೀ ಚಂದ್ರಮರ ಜೋಽಡ ಽ
ಬೆಳುದಿಂಗಳ ನೋಡ ಽ ||

ಕಲಿ ಕಪ್ಪು ಎಲ್ಲಿನೂ ಇಲ್ಲ
ಒಂದೆ ಸವನೆಲ್ಲ
ಎಲ್ಲನೂ ನುಣುಪ ಽ
ಎಲ್ಲನೂ ನುಣುಪು ||
ಇದು ಹಾಲುಗಡಲಿನಽ ಸೀಮಿ
ಛಂದ್ರಮನೆ ಸ್ವಾಮಿ
ಚಂದ್ರಮನೆ ಸ್ವಾಽಮಿಽ
ಏನೆಂಥ ಹಂದರದ ಈಽಡ ಽ
ಬೆಳುದಿಂಗಳ ನೋಡ ಽ ||

ರೋಹಿಣಿಯು ಎಡೆಯು ಕೆಂಪೆಳ್ಳು
ಗೆಳತಿ ಅವನವಳು
ನಲೀತಾಳ ಮುಂದ ಽ
ನಲೀತಾಳ ಮುಂದ ||

ಹಾಕ್ಯಾರ ಚಿಕ್ಕಿಗೆಳತ್ಯಾರ
ಕೃತ್ತಿಕೀ ಹಾರ
ಕೃತ್ತಿಕೀ ಹಾಽರಽ
ಕಳಿಲಾಕ ಇದ್ದ ಬಿದ್ದ ಕೇಽಡಽ
ಬೆಳುದಿಂಗಳ ನೋಡಽ ||
ನೆರೆದವರು ಹರುಹಿದರು ಊದಿ
ಮಂತ್ರಿಸಿದ ಬೂದಿ
ಮೆಚ್ಚು ಮಾಟಕ್ಕಽ
ಮೆಚ್ಚು ಮಾಟಕ್ಕ ||
ನೆಲದವರು ನಿದ್ದಿಯಽ ಪಾಲು
ಮೂರು ಮುಕ್ಕಾಲು
ಮೂರು ಮುಕ್ಕಾಽಲುಽ
ಅರಹುಚ್ಚು ಎಚ್ಚತ್ತರು ಕೂಽಡಽ
ಬೆಳುದಿಂಗಳ ನೋಡಽ ||
ಮದುಮಗಳ ಕಣ್ಣಿನಽ ಬಗೀ
ಚಂದಿರನ ನಗಿ
ಸುತ್ತ ಹರಿದಽದಽ
ಸುತ್ತ ಹರಿದಽದ ||
ಕಂಡವರ ಬಾಳು ಮರಿಸ್ಯಽದ
ತಣ್ಣ ಗಿರಸ್ಯಽದ
ತಣ್ಣ ಗಿರಸ್ಯಽದಽ
ಇದು ಮಾಯಕಾರರ ಬೀಽಡಽ
ಬೆಳುದಿಂಗಳ ನೋಡಽ ||
ಸೂಸಿರುವ ನಗಿಯು ಬಗಿಹೀರಿ
ಮದಾ ತಲಿಗೇರಿ-
ಥಾಂಗ ಟಿಂಹಕ್ಕಿಽ
ಹಾಂಗ ಟಿಂಹಕ್ಕಿ ||

## ನಾದಲೀಲೆ

ಚೀರ‍್ತ್ಽದ ಗಿಡಾ ಬಿಟ್ಟೋಽಡಿ
ಗಿಡಕ ಸುತ್ತಾಡಿ
ಗಿಡಕ ಸುತ್ತಾಽಡಿಽ
ಬೆಪ್ಪಾಗೆದ ಕಾಡೂಮೇಽಡಽ
ಬೆಳುದಿಂಗಳ ನೋಡಽ ||
ಮರ ಮರದ ಗೊನೀಗೆ ಕೂತು
ಹಾರಿ ಮೈ ಸೋತು
ತೆಪ್ಪಗಽ ಗಾಽಳಿಽ
ತೆಪ್ಪಗಽ ಗಾಳಿ ||
ತೂಕಡಸತಽದ ತಾನೀಗ
ಜಂಪು ಬಂಧಾಂಗ
ಜಂಪು ಬಂಧಾಂಽಗಽ
ಇದು ಅದರ ತುಪ್ಪಳದ ಗೂಽಡಽ |
ಬೆಳುದಿಂಗಳ ನೋಡಽ ||
ಹೂತಽದ ಸುಗಂಧೀ ಜಾಲಿ
ಗಮ ಗಮಾ ಬೇಲಿ
ತುಳುಕತದ ಗಂಧಽ
ತುಳುಕತದ ಗಂಧ ||
ಶ್ಯಾವಂತಿ ಹೂವಿನ ಕಂಪು
ಇಡಿಗಿಸಿತು ತಂಪು
ಇಡಿಗಿಸಿತು ತಂಪುಽ
ಇದು ಸಾಕು ಬೇರೆ ಏನು ಬ್ಯಾಽಡಽ
ಬೆಳುದಿಂಗಳ ನೋಡಽ ||
ದಣಿಸಿದಾ ಹಗಲು ಹಿಂಗ್ಯಾಽದ
ಕತ್ತಲಿಂಗ್ಯಾಽದ

ನಾಮಲೀಲೆ

ಬೇರೆ ಈ ಕಾಽಲ ಽ
ಬೇರೆ ಈ ಕಾಲ ||

ನಡು ನಿದ್ದಿಯೊಳಗ ಇದ್ದಾಂಗ
ಕನಸು ಬಿದ್ದಾಂಗ
ಕನಸು ಬಿದ್ದಾಂಗ ಽ
ತೆರೆದೂದ ತಣವಿಕೀ ನಾಽಡ ಽ
ಬೆಳುದಿಂಗಳ ನೋಡ ಽ

ಜಗ ಧವಳ ಗಂಗ್ಯಾಗ ಮುಳುಗಿ
ಮೈ ಮನಾ ಬೆಳಗಿ
ಸಮಾಧಿಯು ಹತ್ತಿ ಽ
ಸಮಾಧಿಯು ಹತ್ತಿ ||

ಮೋಡನೂ ಬೆಳ್ಳಗಾಗ್ಯಾವ
ತೆನೀ ಮಾಗ್ಯಾವ
ತೆನೀ ಮಾಗ್ಯಾಽವಽ
ಹಾಲುಣಿಸು ಎಲ್ಲಕೂ ಪಾಽಡ ಽ
ಬೆಳುದಿಂಗಳ ನೋಡಽ ||

ಅರೆ ಮರವು ಮಾಡುವೀ ಬಂಧ
ಯಾವುದೀ ಛಂಧ
ಯಾವುದೀ ಥಾಽಟ ಽ
ಯಾವುದೀ ಥಾಟ ? ||

ಸವಿರಾಗ ಬೆರಸಿದ ಽ ಉಸಿರು.
ಇದಕ ಯಾ ಹೆಸರು
ಇದಕ ಯಾ ಹೆಸಽರ ಽ ?
ಅಂಬಿಕಾತನಯನ ಹಾಽಡ ಽ
ಬೆಳುದಿಂಗಳ ನೋಡ ಽ ||

## ೪೭. ತಾಯಿ

ಯಾರಿಗಿಂತ ಯಾರು ಹೆಚ್ಚು ?
ಯಾರಿಗಿಂತ ಯಾರು ಕಡಮೆ ?
ಹೆಚ್ಚು—ಗಿಚ್ಚು ಕಡಮೆ—ಗಿಡಮೆ
ಎಂಬುದೆಲ್ಲ ಇಚ್ಛೆಯಾಟ.

ತಾಯಿಗಿಂತ ಯಾರು ಹೆಚ್ಚು ?

ಬಸಿರ ಕುತ್ತ ಹೊತ್ತುಕೊಂಡು
ಬಯಕೆಗಾಗಿ ಕಾಡಿಬೇಡಿ
ಬೇನೆತಿಂದು ಬಳಲಿ ಹೆತ್ತ
ನಕ್ಕರಾರೋ ನನ್ನ ಚಿನ್ನ ?

ಮೊಲೆಯನೂಡಿ ಮೊಗವ ನೋಡಿ
ಎಣ್ಣೆ ಹೂಸಿ ಬೆಚ್ಚನೆರೆದು
ಹಾಸಿಹೊಚ್ಚಿ ಹಾಡಿಗೀಡಿ
ನಲಿದರಾರೊ ನನ್ನ ಚಿನ್ನ !

ಹಗಲನಿರುಳನೊಂದು ಮಾಡಿ
ಹೊಟ್ಟೆ ನೆತ್ತಿಗಾಗಿ ನಿನ್ನ
ಎಣ್ಣೆ ಬೆಣ್ಣೆ ಹಾಲು ತರಲು
ಅಲೆದರಾರೊ ನನ್ನ ಚಿನ್ನ ?

ತೊದಲ ಮಾತ ತಪ್ಪು ಹೆಜ್ಜೆ
ತೊಂಡುನಗೆಯ ತೊಂಡೆಬಾಯ
ಕಂಡು ಕಂಡು ಮುತ್ತನಿಟ್ಟು
ಒಲಿದರಾರೊ ನನ್ನ ಚಿನ್ನ ?

ಮಗನ ದುಃಖಕಾಗಿ ಕೊರಗಿ
ಮಗನ ಸುಖಕ್ಕಾಗಿ ಸೊರಗಿ
ಮಗುವೆ ಜಗವದಾಗಿ ತೋರಿ
ಬೆಳೆದರಾರೊ ನನ್ನ ಚಿನ್ನ ?

ನಲ್ಲನಿತ್ತ ಮುತ್ತನೊಂದ
ತನ್ನ ಹಾಲಿನಿಂದ ತೊಳೆದು
ಕಣ್ಣ ಬೆಳಗಿನಿಂದ ಬೆಳಗಿ
ಕುಣಿದರಾರೋ ನನ್ನ ಚಿನ್ನ ?

ತಾಯಿಗಿಂತದಾರು ಹೆಚ್ಚು ?
ಯಾರು ಹೆಚ್ಚು ? ಯಾರು ಹೆಚ್ಚು ?
ತಾಯಿಗಿಂತ ತಾಯ ಬಾಯಿ !

ಮಾತನಾಡಿ ಮುತ್ತನಿತ್ತು
ಹಾಡಿನೊಂದ ಗುಟುಕ ಕುಡಿಸಿ
ಕಥೆಯದೊಂದು ಕುಟುಕ ಹಾಕಿ
ನೋಡಲಾಡಲೋಡಕಲಿಸಿ
ಮಾತಿನೊಂದು ಮಂತ್ರದಿಂದ
ನಮ್ಮ ದೇಹಯಂತ್ರ ನಡೆಸಿ-
ದಂಥ ನಮ್ಮ ತಾಯ ಬಾಯ
ಆ ಮಾತೆ ಜನ್ಮದಾತೆ !

ಒಡಲ ಹುಟ್ಟು ಮೊದಲ ಹುಟ್ಟು;
ಮಾತಿನಿಂದ ಪೂತನಾಗಿ
ತಾಯಿ ಮನದ ಮೂರ್ತಿಯಾಗಿ
ಅವಳ ಎದೆಯು ಗರ್ಭಗುಡಿಯ
ಮಿಣುಕು ಮಿಣುಕು ಬೆಳಕಿನಲ್ಲಿ

ಮುಗುಳ ನಗೆಯನರಳಿಸುತ್ತ
ನಿಲ್ಲಲಾಗ ಮರಳು ಹುಟ್ಟು.
ಆ ಹುಟ್ಟಿ ನಮ್ಮ ಹುಟ್ಟು—
ನಮ್ಮ ಜನ್ಮದೆಲ್ಲ ಗುಟ್ಟು
ಅಲ್ಲಿ ಇಹುದು ಅಲ್ಲೆ ಇಹುದು.

ಮಾತಿಗಿಂತ ಏನು ಹೆಚ್ಚು ?
ತಾಯ ಮಾತಿಗಿಂತ ತಾಯಿ
ಹೆಚ್ಚು ಎಂಬೆ ಅಯ್ಯೊ ಹುಚ್ಚಿ !
ಆವಳ ಪ್ರೀತಿ ಅವಳ ರೀತಿ
ಕಾಲು ಪಾಲು ಮೆಚ್ಚು ನಚ್ಚು
ಕಾಲು ಪಾಲು ಮೋಹ ಹುಚ್ಚು;
ಲಕ್ಷ ಕೋಟಿ ಅಬ್ಜ ವರ್ಷ-
ದಿಂದ ಬಂದ ಜನುಮದೊಂದೆ
ಕಡಲಿನೊಡಲ ಸಿಂಪಿನಂತೆ
ನನ್ನ ನಿನ್ನ ಅವನ ತಾಯಿ.

ಕಪ್ಪು ನೀರ ಕುಡಿಯಬಹುದು
ಉಪ್ಪು ನೀರ ಬಾಳು ಸಲ್ಲ,
ಬಾಳು ಸಲ್ಲದೆಲ್ಲ ಅಹುದು
ಅಲ್ಲಿ ಇಲ್ಲಿ ಎಲ್ಲ ಕಡೆಗು
ಉಪ್ಪು ನೀರೆ ಉಪ್ಪು ನೀರು
ಅದರ ಮೇಲೆ ಒಪ್ಪಹಾಕಿ-
ದಂತೆ ಮೂಡಿ ಮುಳುಗುವಂಥ
ನಗೆಯು ಕಾಣೊ ಬರಿಯ ಬುರುಗು !

## ೪೮. ಕವನ

ಗಾಳಿ ಕಿರಿಸುಳಿ ಹುಟ್ಟಿತು
ತಾನೆ ತುಸ ಕಣ್ಬಿಟ್ಟಿತು ।
ಮೆಲ್ಲನೆದೆಯನು ತಟ್ಟಿತು
ಅದುವೆ ಆಗಸ ಮುಟ್ಟಿತು ।
ಕಣ್ಣು ಬಣ್ಣವನಿಟ್ಟಿತು
ಉಸಿರು ನಡಿಗೆಯ ಕೊಟ್ಟಿತು
ನೆವಕೆ ನುಡಿಯನ್ನುಟ್ಟಿತು
ಕವನ-ವೇಷವ ತೊಟ್ಟಿತು ।

*     *     *

ಅದರ ಕಿರಿನುಡಿ ಬಿಟ್ಟಿತು
ಕಲ್ಲೆದೆಯೊಳೂ ನಟ್ಟಿತು ।
ಕೊಂಡೆನಾಲಿಗೆ ಸುಟ್ಟಿತು
ಹುಸಿಯ ಕೆಡವಿತು ಕುಟ್ಟಿತು ।
ದುಗುಡಗಳ ಬೆನ್ನಟ್ಟಿತು
ಮಲೆತವರ ತಲೆ ಮೆಟ್ಟಿತು ।

*     *     *

ಅದರ ನೋಟವು ಬಟ್ಟಿತು
ನಾಕ ನರಕವ ಮುಟ್ಟಿತು ।
ಕರುಳ ಕರೆಗೋಗೊಟ್ಟಿತು
ನಲಿಸಿ ಸಂತಸಬಟ್ಟಿತು ।
ಪೂತಚಲುವಲಿ ಪಟ್ಟಿತು
ಒಲವಿನೊಲವನು ಒಟ್ಟಿತು ।
ಜೇನುಹುಟ್ಟಿಯು ಕಟ್ಟಿತೋ
ಹಾಡುಹುಟ್ಟಿತೊ ಹುಟ್ಟಿತು

ಹಾಡಿನಲೆಯಲೆ ಅಲೆದಿತು
ತಾರೆಬಳಗವು ಕೆಲೆದಿತು।
ಋತುಗಳೊಳು ನೆಲ ನಲಿದಿತು
ಸೂರ್ಯ ಚಂದ್ರನಿಗೊಲೆದಿತು।
ಜೀವ ಜೀವ್ಗಳಸೋತವು
ಸವಿಯ ಸುಗ್ಗಿಗೆ ಸೋತವು।
ಭೂತವೂ ಜಡಜಾತವೂ
ಇದರೊಳೋತಪ್ರೋತವು ॥

---

# ೪೯. ಕನ್ನಡದ ಕಂದವ್ವನ ಲಾಲಿ

ಓರ್ವ ತಾಯಿಯು ತನ್ನ ಕೂಸಿರುವ ತೊಟ್ಟಿಲವ ಕೈಯಿಂದ
ತೂಗುತಿಹಳೋ
ಪೂರ್ವ ಪಶ್ಚಿಮ ಘಟ್ಟದಲ್ಲಿ ಪಟ್ಟಿರುವಂಥ ನಾಡನ್ನೆ
ನೂಗುತಿಹಳೋ ॥ ಪ ॥

ನೆಚ್ಚನಾಟಿಸುವಂಥ ಮೆಚ್ಚು ಮಾಟವ ಮಾಳ್ಪ ಮೊಗವುಳ್ಳ
ಮಗಳೆ ಜೋ ಜೋ
ಹುಚ್ಚು ಹಿಡಿಸುವ ಕಣ್ಣ ಮುಚ್ಚಿದರೆನಗೆಯುಳ್ಳ ನನ್ನ ಎದೆ-
ಮುಗುಳೆ ಜೋ ಜೋ ॥

ನಿನ್ನ ತಳಿ ಬಳೆಯಲೌ ಹಳ್ಳಿ ಹಳ್ಳಿಗೆ ಕರಿಕೆ ಕಳ್ಳಿಯೊಲು
ಕಂದ ಜೋ ಜೋ
ನಿನ್ನ ಹೊಳೆ ಹರಿಯಲೌ ಕೊಳ್ಳ ಕೊಳ್ಳಗಳಲ್ಲಿ ತಾವರೆಯ
ಬಳ್ಳಿ ಜೋ ಜೋ ॥

ಮುಗಿಲಿನೊಳು ತೊಟ್ಟಿಲವ ಕಟ್ಟಿಸುವೆ ಹೊಟ್ಟೆಯಲಿ ಹುಟ್ಟಿ ಬಂ-
ದವ್ವ ಜೋ ಜೋ
ಹಗಲು ನಸುಕಿನ ಬಸುರಿನಿಂದ ಮೂಡುವ ತೆರದಿ ನನ್ನ ಕಂ-
ದವ್ವ ಜೋ ಜೋ ॥

ಎಂದು ಬಂದೀ ಎಂದು ಹಾದಿ ನೋಡುತಲಿದ್ದೆ ನಾನು ನೆರೆ
ನಂಬಿ ಜೋ ಜೋ
ಆಟಪಾಟಗಳಲ್ಲಿ ನೋಟಕೂಟಗಳಲ್ಲಿ ನೆಲೆಗೊಂಡ
ಗೊಂಬಿ ಜೋ ಜೋ ॥

ಸದ್ದಮುದ್ದಾಗಿದ್ದ ಮೋಹ ಮಮತೆಯ ಮೂರ್ತಿ ನೀನಾಗಿ
ಬಂದೆ ಜೋ ಜೋ
ಮುದ್ದು ಹರೆಯದ ಮುದಕೆ–'ತಾಯಿ' ಹೆಸರಿನ ಕೀರ್ತಿ–ನೀನಾಗಿ
ತಂದೆ ಜೋ ಜೋ ||

ಸಹ್ಯವಾಯಿತು ಬಾಳ್ವೆ–ನಿನ್ನ ಚಿಂತಾಮಣಿಯು ತುಂಬಿತುಡಿ-
ಯನ್ನು ಜೋ ಜೋ
ಸಹ್ಯಾದ್ರಿ ಶೃಂಗದೆಣೆ ನನ್ನ ತುಂಗಸ್ತನದ ಹಾಲು ಕುಡಿ-
ದಿನ್ನು ಜೋ ಜೋ ||

ನಾಳೆ ಬೆಳಗಿನವರೆಗೆ ಮಲಗು ಸಂಪಿಂವಾಗಿ ಆತ್ಮ–ತನು-
ಜಾತೆ ಜೋ ಜೋ
ನಾಳೆ ಬೆಳಗಿನವರೆಗೆ **ಅಂಬಿಕಾತನಯದತ್ತನ** ತೊದಲು
ಮಾತೆ ಜೋ ಜೋ ||

* * * *

ಲಾಲಿಪರೆ ಲೀಲೆಯಲ್ಲುಲಿದ ಲಾಲಿಯನೀಗ ಲಾಲಿಸಿರಿ,
ಲಾಲಿ, ಜೋ ಜೋ
ಪಾಲಿಪರೆ ಆಲಿವರೆ, ತಾಯಿ–ಮಗಳನ್ನೀಗ ಪಾಲಿಸಿರಿ,
ಲಾಲಿ ಜೋ ಜೋ

---

## ೫೦. ಭಾವಗೀತ

“ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸಾ”
ಮಸೆದ ಗಾಳಿ ಪಕ್ಕ ಪಡೆಯುತಿತ್ತು ಸಹಜ ಪ್ರಾಸಾ
ಮಿಂಚಿ ಮಾಯವಾಗುತಿತ್ತು ಒಂದು ಮಂದಹಾಸಾ
ಭೃಂಗದ ಬೆನ್ನೇರಿ ಬಂತು . . . .

ಏನು ಏನು ? ಜೇನು ಜೇನು ? ಎನೆ ಗುಂಗುಂ ಗಾನಾ
ಓಂಕಾರದ ಶಂಖನಾದಕಿಂತ ಕಿಂಚಿದೂನಾ
ಕವಿಯ ಏಕತಾನ ಕವನದಂತೆ ನಾದಲೀನಾ
ಭೃಂಗದ ಬೆನ್ನೇರಿ ಬಂತು . . . .

ಒಡಲ ನೂಲಿನಿಂದ ನೇಯುವಂತೆ ಜೇಡ ಜಾಲಾ
ತನ್ನ ದೈವರೇಷೆ ಬರೆಯುವಂತೆ ತಾನೆ ಭಾಲಾ
ಉಸಿರಿನಿಂದೆ ಹುಡುಕುವಂತೆ ತನ್ನ ಬಾಳ ಮೇಲಾ
ಭೃಂಗದ ಬೆನ್ನೇರಿ ಬಂತು . . . .

ತಿರುಗುತಿತ್ತು ತನ್ನ ಸುತ್ತು ಮೂಕಭಾವ ಯಂತ್ರಾ
ಗರ್ಭಗುಡಿಯ ಗರ್ಭದಲ್ಲಿ ಪಡಿನುಡಿಯುವ ಮಂತ್ರಾ
ಮೂಡಿ ಮೂಡಿ ಮುಳುಗಿ ಮುಳುಗಿ ಮೊಳಗುವೊಲು ಸ್ವತಂತ್ರಾ
ಭೃಂಗದ ಬೆನ್ನೇರಿ ಬಂತು . . . .

ಎಲ್ಲೆಲ್ಲೂ ಸೃಷ್ಟಿದೇವಿಗಿಟ್ಟ ಧೂಪ ಧೂಮಾ
ಲಹರಿ ಲಹರಿ ಕಂಪಬಳ್ಳಿ; ಚಿತ್ತ್ರರಂಗ ಭೂಮಾ
ದಾಂಗುಡಿಗಳ ಬಿಡುತಲಿತ್ತು ಅರಳಲಿತ್ತು, ಪ್ರೇಮಾ
ಭೃಂಗದ ಬೆನ್ನೇರಿ ಬಂತು . . . .

ವಜ್ರಮುಖವ ಚಾಚಿ ಮುತ್ತುತಿತ್ತು ಹೂವ ಹೂವಾ
ನೀರ ಹೀರಿ ಹಾರುತಿತ್ತು ನೀರಸವಾ ಜಾವಾ
ಅಯ್ಯೊ ನೋವೆ ! ಅಹಹ ಸಾವೆ ! ವಿಫಲ ಸಫಲ ಜೀವಾ
ಭೃಂಗದ ಬೆನ್ನೇರಿ ಬಂತು . . . .

ಗಾಳಿಯೊಡನೆ ತಿಳ್ಳಿಯಾಡುತಾಡುತದರ ಓಟಾ
ದಿಕ್ತಟಗಳ ಹಾಯುತಿತ್ತು; ಅದರ ಬಿದಿಗೆ ನೋಟಾ
ನಕ್ಕ ನಗುವ ಚಿಕ್ಕೆಯೊಡನೆ ಬೆಳೆಸುತಿತ್ತು ಕೂಟಾ
ಭೃಂಗದ ಬೆನ್ನೇರಿ ಬಂತು....

ಅಂತು ಇಂತು ಪ್ರಾಣತಂತು ಹೆಣೆಯುತಿತ್ತು ಬಾಳಾ
ಅಲ್ಲಿ ಇಲ್ಲಿ ಚೆಲುವು ನಿಂತು ಹಾಕುತಿತ್ತು ತಾಳಾ
'ಬಂತೆಲ್ಲಿಗೆ?' ಕೇಳುತಿದ್ದನೀಯನಂತ ಕಾಳಾ
ಭೃಂಗದ ಬೆನ್ನೇರಿ ಬಂತು....

ಮಾತು ಮಾತು ಮಥಿಸಿಬಂದ ನಾದದ ನವನೀತಾ
ಹಿಗ್ಗಬೀರಿ ಹಿಗ್ಗಲಿತ್ತು ತನ್ನ ತಾನೆ ಪ್ರೀತಾ
ಅರ್ಥವಿಲ್ಲ ಸ್ವಾರ್ಥವಿಲ್ಲ ಬರಿಯ ಭಾವಗೀತಾ
ಭೃಂಗದ ಬೆನ್ನೇರಿ ಬಂತು....

ಭೃಂಗದ ಬೆನ್ನೇರಿ ಬಂತು ಕಲ್ಪನಾ ವಿಲಾಸಾ
ಮುಸೆದ ಗಾಳಿ ಪಕ್ಕ ಪಡೆಯುತಿತ್ತು ಸಹಜ ಪ್ರಾಸಾ
ಮಿಂಚಿ ಮಾಯವಾಗುತಿತ್ತು ಒಂದು ಮಂದಹಾಸಾ
ಭೃಂಗದ ಬೆನ್ನೇರಿ ಬಂತು....



# ಮೊದಲ ಚರಣಗಳು

ಪುಟ

# ಕವನಗಳ ಭಾವ ಸಂದರ್ಭ ಸೂಚನೆ

೧. ಜೀವನದ ತಾಲ-ಲಯಾನುಸಾರಿತ್ವದಲ್ಲಿ ಒಂದು ನಾದ ತನ್ಮಯತೆ ಇದೆ. ಮರಣದ ಭಯ ಬೇತಾಲಕ್ಕೆ ಎಳೆಯುವದು. ಜೀವನದ ತನ್ಮಯತೆ ಬೆಳಕು, ಹೂವು, ಹರಿಣ, ಹಸುಗಳ ಜೀವನದಲ್ಲೂ ದಿನವೂ ಕಂಗೊಳಿಸುವದು.

೨. ಮಬ್ಬುಗವಿವ ಹೊತ್ತಿನಿಂದ ನಸುಕು ಹರಿಯುವವರೆಗೂ ಜೀವನದಲ್ಲಿಯೂ ಅನೇಕ ಅಶುಭ ಸೂಚಕ ಧ್ವನಿಗಳು, ಘಟನೆಗಳು ಜೀವವನ್ನು ತಲ್ಲಣಗೊಳಿಸುವವು. ಆದರೆ ಬೆಳಕಿನ ಹತ್ತಿರದ ಒಂದು ಶುಭಧ್ವನಿ ಉಲಿದರೆ ಸಾಕು, ಜೀವನಸಂಗ್ರಾಮಕ್ಕೆ ಜೀವ ಸಿದ್ಧವಾಗುತ್ತದೆ.

೩. ಒಂದು ಕನಸಿನ ಸ್ಮರಣೆ. ದಿಗಂಬರನಾಗಿ ಪರೀಕ್ಷೆ ಕೊಡುವ ಕಾಲ ಎಲ್ಲ ಜೀವಿಗಳಿಗೂ ಬರುವದು. ಆಗ ದೇವಕನ್ನಿಕೆಯರ ಸ್ಪರ್ಶಕ್ಕೆ ಅಧೋಗತಿಯ ಲಹರಿಗಳಿದರೆ ಆ ಪರೀಕ್ಷೆಯನ್ನು ಮತ್ತೊಮ್ಮೆ ಕೊಡಬೇಕಾಗುವದು. ಆದರೆ ಈ ಪರೀಕ್ಷೆ ಜೀವವನ್ನು ಏಳು ಎಂದು ಎಬ್ಬಿಸಲಿಕ್ಕೆ; ಕೆಡಹಲಿಕ್ಕೆ ಅಲ್ಲ.

೪. ಒಂದು ಕಾಣ್ಕೆ. ಹೊರಗಿದ್ದಂತೆ ಒಳಗೊಂದು ಜೀವನ ಇದೆ. ಅದರ ಬೆಳಕಿನ ಮುಂದೆ ಹೊರಗಿನದು ಕತ್ತಲ. ಆದರೆ ಅದು ಸ್ಥಿರವಾಗಿ ನಿಲ್ಲುವದು ಪ್ರಾರಂಭದಲ್ಲಿ ಅಪರೂಪ. ಆದರೆ ಆ ಬೆಳಕು ಚಿಕ್ಕೆಯಾಗಿ ರೂಪಗೊಂಡು ಧ್ರುವದಂತೆ ನಮ್ಮನ್ನು ಆಕರ್ಷಿಸುವಾಗ ವ್ಯೈಯೇ ಉರಿ ನಾಲಿಗೆಯಂತೆ ಊರ್ಧ್ವಮುಖವಾಗಿ ಏರುವದು.

೫. ಎಲ್ಲ ಜೀವಗಳಿಗೂ ತಮ್ಮ ಹಳೆಯ ಹಿಂಡನ್ನಗಲಿದಾಗ ತಮ್ಮ ಹೊಸ ಜೀವನದ ನಾಡನ್ನು ಹುಡುಕಿಕೊಳ್ಳುವ ಕಾಲ ಬರುತ್ತದೆ. ಶ್ರದ್ಧಾಬಲದಿಂದಲೇ ಜೀವದ ಗಿಣಿ ಏಕಾಕಿಯಾಗಿ ಮೂಡಲದತ್ತ ಪಯಣ ಬೆಳಸಬೇಕಾಗುತ್ತದೆ.

೬. ಧ್ಯೇಯ ದೀಕ್ಷಿತವಾದ ಜೀವ ಕೊರಳಪಟ್ಟಿಯಿದ್ದ ನಾಯಿಯಿದ್ದಂತೆ. ಗುರುತ್ವಾಕರ್ಷಣದಿಂದ ತನ್ನ ಧ್ಯೇಯದತ್ತ ಸಾರಿದಾಗ ಹಾದಿಯಲ್ಲಿ ಅದು ಎಷ್ಟು ತಡೆದರೂ ನಿಂತರೂ ಅದಕ್ಕೆ ಗುರಿಯದಲ್ಲದೆ ಬೇರೆ ಆಶ್ರಯವಿಲ್ಲ. ಆಗ ನಾಯಿಯ ಕೂಗು ನಾಯಕರಿಗಾಗಿ.

೭. ಅವರವರ ಎದೆಯಲ್ಲಿ ಒಕ್ಕಲಾಗಿ ನಿಂತ ಅವರವರ ಕ್ಷೇತ್ರಜ್ಞ ಒಬ್ಬನಿದ್ದಾನೆ. ಅವನಿಗೆ ನಮ್ಮ ನಮ್ಮ ಹೊಲ ನಾವು ಒಪ್ಪಿಸಬೇಕು. ಅಂದರೆ ಕೂಳು ಕಾಣುತ್ತೇವೆ. ಇಲ್ಲದಿದ್ದರೆ ಜೀವನದುದ್ದ ಬರಗಾಲ.

೮. ಜೀವನ ಒಂದು ಮಹಾಸಾಗರ. ಜೀವ ಒಂದು ಮೀನವೂ ಹೌದು, ಆನೆಯೂ ಹೌದು. ಆದರೆ ಮಹಾಸಾಗರವನ್ನು ಹಸೆಮಣೆಯಾಗಿ ಕಾಣುವ ಗಂಡುತನ ಮೈಗೊಂಡು ಬರುವವರೆಗೂ ಈ ಎಳೆದಾಟ ಈ ಏಳುಬೀಳಾಟ ಜೀವನದ ಗುಡಿಯ ಒಂದು ಸಾಧಕ.

೯. ಅಲಿಖಿತ ನಾಟಕದೊಳಗಿನ ಒಂದು ಹಾಡು. "ಇನ್ನೂ ಯಾಕೆ ಬರಲಿಲ್ಲ" ಎಂಬ ಹಾಡನ್ನು ಕೇಳಿದ ನಾಯಕನೇ ಈ ಹಾಡನ್ನು ಹೇಳುತ್ತಾನೆ. ಮನುಷ್ಯದೇಹಗಳಲ್ಲಿ ಪಶುಜೀವನ ಸಾಗಿದ್ದನ್ನು ಕಂಡು ಹೇಸಿ ಜೀವನ ರಂಗದಿಂದ ನಿವೃತ್ತನಾಗಲು ನಿಂತ ವೀರ ವಿರಕ್ತ ಜೀವನ ಒಂದು ತನ್ನ ಎಳೆತನದ, ಹುಡುಗತನದ, ತಾರುಣ್ಯದ ಕನಸುಗಳನ್ನು ಮರಳಿ ತನ್ನೆದೆಗೆ ಕರೆಯುತ್ತಿದೆ. ಇಂಥ ಕರುಣೆಯ ಗಾಂಭೀರ್ಯ ಒಂದು ಸಂಧಿಕಾಲದಲ್ಲಿ ತಲೆಯೆತ್ತುವದುಂಟು.

೧೦. ಕನಸಿನ ಉಲ್ಲೇಖ. ಒಂದು ಅನುಭವದಿಂದ ಇನ್ನೊಂದು ಅನುಭವಕ್ಕೆ ಏರುವಾಗ ಹೃದಯದ ದೇಗುಲದಲ್ಲಿದ್ದ ಮಧುವನ್ನು ಹನಿಹನಿಯಾಗಿಯೇ ಆದರೂ ಪ್ರಕಾಶವು ಆಕಾರಗೊಟ್ಟು ನಿಲ್ಲುವವರೆಗೆ ಕುಡಿಯಬೇಕಾಗುತ್ತದೆ.

೧೧. ಗೆಳೆಯ ಮಧುರಚೆನ್ನರಿಗೂ ನನಗೂ ಇರುವ ಒಳಜೀವದ ಸಂಬಂಧವನ್ನು ಕುರಿತು ರೂಪುಗೊಂಡು ಬಂದ ಒಂದು ಕನಸನ್ನು ಕುರಿತು ಬರೆದ ಭಾವಗೀತ. ಇದಕ್ಕೆ ಉತ್ತರ ರೂಪವಾಗಿ ಮಧುರಚೆನ್ನರು ಈ ಮೊದಲೇ ಒಂದು ಕವನ ಪ್ರಕಟಿಸಿದ್ದಾರೆ. ನಮ್ಮಿಬ್ಬರ ಜೀವನಕ್ಕೂ ಮಹಾ ಪ್ರೇರಣೆಯಾಗಿ ನಿಂತ ಶಕ್ತಿ ಒಂದೇ. ಆದರೂ ನಮ್ಮ ದೃಷ್ಟಿ ಎರಡು ದಿಕ್ಕಿನಲ್ಲಿ ಹರಿಯುತ್ತಿದೆ.

೧೨. ತಾಯಿಯ ಮೈಯು ಕೆಲಸದಲ್ಲಿ ತೊಡಗಿದಾಗಲೂ ಜೀವ ಕೂಸಿನಲ್ಲಿರುತ್ತದೆ. 'ಒಡಲೆರಡು ಜೀವವೊಂದು' ಎಂಬ ಈ ಕರುಣ ಮಧುರಾನುಭವವನು ತಾಯಿಯಂತೆ ಕಂಡವರಾರು?

೧೩. ಮಕ್ಕಳಿಗೆ ತಾವು ಪ್ರಕಾಶವಾಗಿ ಆಡುವ ಮಾತು, ನಡೆಸಿದ ಆಟ ಜನಾಂತಿಕದಂತೆ ಒಂದು ಕಣ್ಣು ಮುಚ್ಚಾಣಿಕೆಯ ಆಟವಾಗಿ ರಮ್ಯವೆನಿಸುವದು. ಅಂತೆಯೇ ಅವರಿಗೆ ಅಜ್ಜಿ ಹೇಳುವ ಯಕ್ಷ ಗಂಧರ್ವ ಕತೆಗಳ ಅಗಮ್ಯ ಆಕರ್ಷಣೆ. ಇಲ್ಲಿ ಒಂದು ಮುದ್ದು ಮಗು–ಜೀವಕ್ಕೆ ಅದರ ಅಂತರಂಗವನ್ನರಿತ ಒಂದು ಕವಿ–ಜೀವ ಈ ಕಲ್ಪನೆಯ ಕವನ ಹೇಳುತ್ತಿದೆ.

೧೪. ಜೀವನದೊಳಗಿನ ಪ್ರಖರತೆಯಂತೆಯೇ ಆದರಿಂದ ಬರಲಿರುವ ಕರುಣಾವರ್ಷದಲ್ಲಿಯೂ ರಮ್ಯತೆಯಿರುವಂತೆ ನಿಸರ್ಗದ ಋತುಮಾನದಲ್ಲಿಯೂ ಇದೆ.

೧೫. ನಂದನವನದಲ್ಲಿದ್ದ ಈ ಕಲ್ಪವೃಕ್ಷ ಸತ್ಯಭಾಮೆಯ ಅಂಗಳಕ್ಕೆ ಮೊದಲು ಬಂತಂತೆ. ಆದರೆ ಅದರ ಹೂವಿನ ಮಳೆಯೆಲ್ಲ ರುಕ್ಮಿಣಿಯ ಅಂಗಳದಲ್ಲಿ ಬಿತ್ತಂತೆ.

ಪಾರಿಜಾತ ಸಮುದ್ರ ಮಂಥನದಲ್ಲಿ ಬಂದ ಚತುರ್ದಶ ರತ್ನಗಳಲ್ಲೊಂದಂತೆ. ಇದರ ಹಿಂದೆ ಅಡಗಿರುವ ಇತಿಹಾಸ ಯಾವುದೇ ಇರಲಿ, ಈ ಹೂವು ಪ್ರಜ್ಞೆಗೆ ನವನವೋನ್ಮೇಷ ವನ್ನು ತರುವದು. ದಿವ್ಯ ಜೀವನದ ಅಭೀಪ್ಸೆಯ ಕುರುಹು ಈ ಹೂವು—ಎಂದು ಒಳಗಂಡವರು ಹೇಳುತ್ತಾರೆ.

೧೬. ಸಾಧನಕೇರಿಯಲ್ಲಿ ಮೊದಲುಸಲ ಶ್ರಾವಣನ ದರ್ಶನವಾದುದು ಹೀಗೆ.

೧೭. ಋತುಗಳ ರಿಂಗಣಗುಣಿತದಲ್ಲಿ ಜೀವನದ ಅಮೃತಶ್ರುತಿಯೊಂದು ಕೇಳಿ ಸುವದು.

೧೮. ಕರು, ಗಿಳಿ, ಮಂಗ, ನಾಯಿ, ಅಳಿಲು ಇವೇ ಮೊದಲಾದ ಸತ್ವಗಳು ನನ್ನ ಜೀವನದಲ್ಲಿ ಒಂದು ಸ್ನೇಹಸಂಬಂಧದಿಂದ ಎಚ್ಚರ ಕೊಟ್ಟು ಹೋಗಿವೆ. ಚಿಗರೆ— ಹಾಗೆ ನೋಡಿದರೆ ಅದೇನದು? ಆದರೆ ಅಂತಃಕರಣವನ್ನು ತಟ್ಟಿದಾಗ ಒಂದು ಕಣ ದಲ್ಲಿಯೂ ಕಡಲೇ ಉಕ್ಕೇರಿ ಬರುವದು. ಇಂಥ ಅನುಭವ ಮಿಂಚಿನಂತೆ ಇದ್ದರೂ ಅದರ ಸ್ಮೃತಿ ಹಾಗಲ್ಲ.

೧೯ ಇದು ಬರಿ ನಿಸರ್ಗ ವರ್ಣನೆಯಲ್ಲ. ಪ್ರಪಂಚಕ್ಕೆ ಹೊಸ ಕಾಲವೊಂದು ಬರುವದಿದೆ ಎಂದು ಮೋಡ-ಗುಡುಗು-ಮಿಂಚು-ಸಿಡಿಲು-ಮಳೆಗಳ ಆರ್ಭಟೆಯಿಂದ ಸಾರುವಂತೆ ಪ್ರೇರಿಸುವ ಭಾವನಾಮಾರುತ.

೨೦. ಮನುಷ್ಯನ ಸುಖಕ್ಕೆ ಮನುಷ್ಯರೇ ಅಡ್ಡಾಗಿ ಬರುವಷ್ಟು ನಿಸರ್ಗ ಬರುವ ದಿಲ್ಲ. ನಿಸರ್ಗಕ್ಕೇನು? ಹುಟ್ಟಿದವರ ಮೇಲೂ ಬೆಳಕು ಚೆಲ್ಲುತ್ತದೆ; ಸತ್ತವರ ಮೇಲೂ ಬೆಳಕು ಚೆಲ್ಲುತ್ತದೆ. ಮಾನವರ ದೌರ್ಬಲ್ಯವನ್ನು ನಿಸರ್ಗದ ಮೇಲೆ ಆರೋಪಿಸುವದ ರಲ್ಲಿ ಅರ್ಥವಿಲ್ಲ. ಮಾಯಾವಾದದ ಜಾರು ಕಣಿವೆಯಿಂದ ಹಾಯ್ದು ಹೋಗುವದರಲ್ಲಿ ಉಪಾಯ ಕಂಡರೂ ಅಪಾಯ ಕಡಿಮೆಯಾಗುವದಿಲ್ಲ. ನಿಸರ್ಗದ ರಮ್ಯತೆ, ಜೀವನದ ಭ್ರಮೆ ಇವೆರಡನ್ನೂ ತಪ್ಪಿಸಿ ಜೀವನೇ ತನ್ನ ದಿವ್ಯತ್ವದಿಂದ ಪ್ರಕಟವಾಗುವವರೆಗೆ ಭ್ರಮಿಸುವ ನೆಲಕ್ಕೆ ಉಪ್ಪುನೀರಿನ ಸೆರೆ ತಪ್ಪಿದ್ದಲ್ಲ.

೨೧. ಅನ್ನಕ್ಕೂ ಪ್ರಾಣಕ್ಕೂ ಇರುವ ನಿಕಟ ಸಂಬಂಧವನ್ನು ಅರಿತೇ ಮನುಷ್ಯ ಮನುಷ್ಯನನ್ನು ಕಾಡುವ ದೌರ್ಜನ್ಯದ ಮಾರ್ಗವನ್ನು ಕಂಡುಕೊಂಡಿದ್ದಾನೆ. ಅನ್ನ ವನ್ನು ನಾಶಗೊಳಿಸುವ ಅಪಚಾರ ಅಪಚಾರಿಗಳ ಪ್ರಾಣಕ್ಕೆ ಮುಳುವು. ಅನ್ನಕ್ಕೆ ಮಾಡಿದ ಅನ್ಯಾಯ ಪ್ರಾಣಕ್ಕೇ ಮಾಡಿದ ಅನ್ಯಾಯ. ಪ್ರಾಣವು ವಿದ್ಯುತ್ತಿಗೂ ಮಹತ್ತರ ವಾದ ದಾಹಕ-ಪ್ರಕಾಶಕ ಶಕ್ತಿಯನ್ನು ಒಳಗೊಂಡಿದೆ. ಪ್ರಾಣದ ಆ ಪ್ರಕಾಶಕಶಕ್ತಿಯ ಉಪಾಸನೆಯನ್ನು ನಾವು ಮಾಡೋಣ. ಅನ್ನದ ಸ್ವಾಮಿತ್ವ ಅದರದು. ಈ ಅಜ್ಞಾನ ವನ್ನು ಹೊಡೆದು ಹಾಕಲು ಈ ಅರಿವಿನ ಅವತಾರವಾಗಬೇಕು.

೩೨. ಹತ್ತು ಅವತಾರಕ್ಕಿಂತ ಒಂದು ಮುತ್ತಿನಂಥ ಅವತಾರ ಬೇಕು. ಅನ್ನದ ಅವತಾರವಾಗದೆ ಪ್ರಾಣದ ಉದ್ಧಾರವಾಗುವಂತೆ ಇಲ್ಲ. ಈ ಅವತಾರವಾಗಬೇಕಾಗಿದೆ ಮಾನವನ ಮನೋಲೋಕದಿಂದ. ಆದರೆ ಅಲ್ಲಿ ಭಾವಕಷಾಯದಿಂದ ಜ್ಞಾನಕರ್ಮಗಳ ಹಾದಿ ಹೀನವಾಗಿ ಬಿಟ್ಟಿದೆ. ಮತೀಯತೆಯೋ ಇರಲಿ, ರಾಜಕೀಯತೆಯೋ ಇರಲಿ, ಭಾವಶುದ್ಧಿಯನ್ನು ಒಪ್ಪಿಕೊಳ್ಳದವರಿಗೆ ಹೊಸ ಮತ ಹೊಸ ರಾಜ್ಯ ಹೊಸ ಸುಖ ದುಃಖದ ಪರ್ಯಾಯಗಳು. ಈ ವಿಚಾರದಲ್ಲಿ ಮಾನವನಿಗಿದ್ದ ದುರ್ಬುದ್ಧಿ ಅವನ ಮನೋದೌರ್ಬಲ್ಯದ ಪರಮಾವಧಿ.

೩೩. ಇಂದಿನ ರಾಜ್ಯನೀತಿಯ ದುರ್ವಿಪಾಕದ ಒಂದು ಭಾಗ ಎಂದರೆ ಜಗತ್ತಿನ ಅನ್ನವನ್ನು ಬೆಳೆಸುವ ಒಕ್ಕಲಿಗನಿಗೆ ಒಂದು ಸಾಮಾನ್ಯವಾದ ಸುಖಜೀವನವನ್ನು ನಡೆಯಿಸಲು ಎಲ್ಲರ ಮುಖ ನೋಡಬೇಕಾಗುತ್ತದೆ. ಇಂಥ ದುಷ್ಕಾಲದಲ್ಲಿ ಜೀವನಕ್ಕಿಂತ ಮರಣದ ಮಹತಿಯನ್ನು ವರ್ಣಿಸುವ ತತ್ತ್ವಜ್ಞಾನಾಭಾಸ ಹುಟ್ಟುತ್ತದೆ.

೩೪. ಮಹಾಲಕ್ಷ್ಮಿಯ ಉಪಾಸಕರು ಎನಿಸಿಕೊಳ್ಳುವ ಗೋಂದಲಿಗರು ಬಡವರಿಂದಲೂ ಒಂದು ಕಾಸನ್ನು ಕೊಸರಿಕೊಳ್ಳಲು ಹೆಣಗುತ್ತಾರೆ; ಕುಣಿಯುತ್ತಾರೆ. ಬಾಣಂತಿಯರ ಸಾವು, ಚಿಕ್ಕಮಕ್ಕಳ ಬಲಿ, ಬಡವರ ಹೊಟ್ಟೆಯುರಿ, ಕಣ್ಣೀರು, ಮಡಿಮೊಗಾರರ ಬಾಯಿಗೆ ಬೀಳುವ ಮಣ್ಣು—ಇವೆಲ್ಲವೂ ಹಣದ ಹಂಚಿಕೆ ಜಗತ್ತಿನಲ್ಲಿ ಸರಿಯಾಗಿಲ್ಲ ಎಂದು ಕೂಗುತ್ತಿವೆ. ಜಗತ್ತಿನಲ್ಲಿ ಹಣ ಕಡಿಮೆಯಾಗಿಲ್ಲ. ಗುಡಿ ಮಾಹಡಿ, ಅಂಗಡಿಗಳಲ್ಲಿ ಅದರ ಧ್ವನಿ ಕೇಳಬರುತ್ತಿದೆ. ಕಾಂಚನಕ್ಕೆ ಕಣ್ಣಿಲ್ಲ ಇದೇ ನಿಜ. ಅಂದರೆ ಕಾಂಚಾಣವುಳ್ಳವರಿಗೆ ಕಣ್ಣು ಬರಬೇಕಾಗಿದೆ. ಈ ಹೊಸ ದೃಷ್ಟಿ ಉದಯವಾಗುವವರೆಗೆ ಕಾಂಚಾಣದ ಕಾಲಿಗೆ ಬೀಳುವವರ ಸಂಖ್ಯೆಯೂ ಕಡಿಮೆಯಾಗುವುದಿಲ್ಲ. ಅದು ತನ್ನ ಕುರುಡುತನದಲ್ಲಿ ತುಳಿಯುವ ಕೃತ್ಯವನ್ನು ನಿಲ್ಲಿಸುವುದಿಲ್ಲ.

೩೫. ಜಗತ್ತು ಬೇಡುತ್ತಿದೆ ಶಾಂತಿಯನ್ನು. ಜಗತ್ತಿನ ನಿಯಂತಾರರು ಅದಕ್ಕೆ ಕೊಡುತ್ತಾರೆ ಸಾಂತಿಯನ್ನು. ರಣದ ಕೊನೆಗೆ ಬರುತ್ತದೆ ಹೆಣದ ಶಾಂತಿ. ಕಾಮ ಕ್ರೋಧಾವಿಷ್ಟರಾದವರು ರಾಜ್ಯಾಧಿಕಾರಕ್ಕೆ ಅಪಾತ್ರರಾಗುತ್ತಾರೆ. ನಿಷ್ಕರುಣೆಗಳು, ಲೋಭಿಗಳು ಜಗತ್ತಿನ ಪಾಲನೆ ಪೋಷಣೆಗಳನ್ನು ಮಾಡಲಾರರು.

೩೬. ರಕ್ತಾಭಿಷೇಕದಿಂದ ಜಗತ್ತಿನಲ್ಲಿ ಶಾಂತಿ ಸ್ಥಾಪನೆ ಮಾಡತಕ್ಕವರು ಎಂಬ ರಾಜಕೀಯ ತಂತ್ರ ‹ಸರ್ವಂ ಸಹೆ› ಎನಿಸಿದ ಭೂಮಿದೇವಿಗೆ ಅಸಮ್ಮತವಾಗಿದೆ. ವಸುಧೆಯೇ ಒಂದು ಕುಟುಂಬ, ಸತ್ವಗಳೆಲ್ಲ ತಮ್ಮ ಸೋದರರು—ಎಂಬ ಭಾವ ಕುತಂತ್ರಗಳಲ್ಲಿ ಉದಯ ಹೊಂದಲಾರದು. ಇದರ ಉದಯವಾಗುವವರೆಗೆ ಈ ರಕ್ತ ಸಿಕ್ತ ಹಸ್ತದವರು ತನ್ನ ಮಕ್ಕಳೇ ಅಲ್ಲ ಎಂಬಂತೆ ಭೂಮಿತಾಯಿ ಒಂದು ಅಲಕ್ಷ್ಯದಿಂದ ತಿರುಗುತ್ತಿದ್ದಾಳೆ.

೨೭. ಸೆರೆಮನೆಯಲ್ಲಿ ಹೋಗಿ ಕುಳಿತಾಗಲೇ ಬಿಡುಗಡೆಯ ವಿಷಯವಾಗಿ ಸ್ಪಷ್ಟ ಕಲ್ಪನೆ ಬರುತ್ತಿದೆ.

೨೮. ನಮ್ಮ ಈಗಿನ ಎಚ್ಚರದ ಅರಿವು ಹುಚ್ಚರ ಅರಿವಿಗಿಂತ ಬಹಳ ದೂರಿಲ್ಲ. ಈ ಎಚ್ಚರದ ಒಳಗೆ ಎಚ್ಚರ ಹುಟ್ಟಿ ಕನಸಿನ ಭ್ರಮೆ ದಾಟಿ ಅಜ್ಞಾನದ ಮುಸುಕು ಸರಿಸಿ ತಲೆಯೆತ್ತಿದಾಗ ನಮ್ಮಲ್ಲಿ ಅವತರಿಸಬೇಕಾದ ಎಚ್ಚರ ಅನಿಮಿಷರ ದಿವ್ಯತೆಯ ಸಮೀಪದ್ದು ಎಂದು ತೋರುತ್ತದೆ.

೨೯. —ಆದರೆ ಅಂಥ ಎಚ್ಚರ ಹುಟ್ಟುವವರೆಗೆ ನಮ್ಮಲ್ಲಿ ಅದರ ಅವತಾರವಾಗುವಂತೆ ಶಾಂತಿ, ತಾಳ್ಮೆ, ವಿವೇಕಗಳಿಂದ ಅದರ ಆಗಮನಕ್ಕಾಗಿ ಕಾಯಬೇಕು.

೩೦. ಅನ್ನ, ಪ್ರಾಣ, ಮನ, ಜ್ಞಾನ-ಕಾಯಗಳಲ್ಲಿ ಜೀವ ಸತಿಯಂತೆ ತನ್ನ ಮಿಡುಕಿನಲ್ಲಿಯೂ ಗೌರವ ಕಾಯ್ದುಕೊಂಡು ತನ್ನ ಅಂತರಂಗದ ಶ್ರದ್ಧೆಯ ಉದ್ಗಾರಗಳನ್ನು ಹೇಳುತ್ತಿದೆ. ಸಚ್ಚಿದಾನಂದದ ವಾಣಿಯಾಗಿ ಪತಿ ರೂಪದಲ್ಲಿ ದಿವ್ಯತೆ ಉತ್ಸಾಹದಾಯಕವಾಗಿ ನುಡಿಯುತ್ತಿದೆ.

೩೧. ನೀರಿನಲ್ಲಿ ಸಹಜ ಶುಚಿತ್ವ ಇದೆ. ಪಾವನತೆ ಇದೆ. ನೀರಿನ ಇನ್ನೊಂದು ಹೆಸರು ಜೀವನ. ನೀರಿನೊಳಗೆ ನೀರೆಯಾಗಿ ನಿಸರ್ಗದಲ್ಲಿ ಒಳ ಹೊರಗೆ ಒಂದು ನಿರ್ವ್ಯಾಜ ಕರುಣೆಯು ಕಾರ್ಯ ಮಾಡುತ್ತಿದೆ. ನಾನು ಇತ್ತೀಚೆ ಬರೆದ 'ಗಂಗಾವತರಣ' ಅಂಥ ಶಕ್ತಿಯನ್ನು ಕುರಿತು ಬರೆದ ಒಂದು ಪ್ರಾರ್ಥನಾ ಪದ್ಯ.

೩೨. ಸೂರ್ಯನಿಗೂ ಚಂದ್ರನಿಗೂ ನಡೆದಿರುವ ಅನಂತ—ಪ್ರಣಯ ಒಂದು ನಿರಂತರ ರೂಪಕವಾಗಿ ಬಣ್ಣಿಸಲಾಗಿದೆ. ಈ ಸೃಷ್ಟಿಯ ಸಂಕೇತವು ಅಣುಕಣದಲ್ಲಿಯೂ ಅನುಭವ ಗೋಚರವಾಗುವದು

೩೩-೩೪. "ಸತಿ" ಎಂಬ ಒಂದು ಅರ್ಧಲಿಖಿತ ನಾಟಕದೊಳಗಿನ ಎರಡು ಗೀತಗಳು. ಪಾಟಲೀಪುತ್ರದ ರಾಜನೊಬ್ಬ ಮುನ್ನೂರು ಹೆಣ್ಣು ಮದುವೆಯಾಗಿ ವೈಶಾಲಿಯ ವಿರಕ್ತಶ್ರೇಷ್ಠಿ. ಧ್ಯಾನಗುಪ್ತನ ಹೆಂಡತಿ ಸತಿಯನ್ನು ಅರಮನೆಗೆ ಆಮಂತ್ರಿಸುತ್ತಾನೆ. ಅರಮನೆಯ ಸೆರೆಮನೆಯಲ್ಲಿ ಇದ್ದ ಆ ಮುನ್ನೂರು ಹೆಂಗಳೆಯರು ರಾತ್ರಿಗೀತ,ಉದಯಗೀತಗಳಾಗಿ ಹೇಳುವ ಎರಡು ಹಾಡುಗಳು ಇವು.

೩೫. ಕುರೂಪತೆಗೆ ಅಂದದ ಉಡುಪು ಇಡುವ ಕಲೆಯೊಂದು ಪ್ರಾಚೀನಕಾಲದಿಂದಲೂ ನಡೆದುಬಂದಿದೆ. ಇಂದಿನ ಕೆಲ ಹೆಂಗಳೆಯರ ಈ ಬೆಡಗಾಟವನ್ನು ಇಲ್ಲಿ ವಿಡಂಬಿಸಲಾಗಿದೆ.

೩೬. ವಿರಸನಾದ ಸರಸಿಯೊಬ್ಬ ಸರಸದಲ್ಲಿ ವಿರಸಗೊಳಿಸಿದ ಪ್ರಣಯಿನಿಯನ್ನು ಕುರಿತು ಹೇಳಿದ ನಾಟ್ಯಗೀತ.

೩೭. ಸೂರ್ಯಪಾನದ ಹೂವಿನಂತೆ ತನ್ನ ಪ್ರಿಯನನ್ನೇ ಅನುವರ್ತಿಸುವ ಮುಗ್ಧೆಯೊಬ್ಬಳನ್ನು ಕುರಿತು: ಅವಳ ಮೂಕಶೋಕದ ರೀತಿಯನ್ನು ಚಿತ್ರಿಸಿದೆ.

೩೮. ಯೌವನದ ಸಹಜಾಕರ್ಷಣೆಯಲ್ಲಿ ಒಂದು ನಿಸರ್ಗದ ಸಂಯಮಾತೀತ ಆವೇಗವಿದೆ. ಈ ಪ್ರಾಣಧರ್ಮ ಒಂದು ಮನೋಧರ್ಮವಾಗಿ ಕಂಡಾಗ ಆ ಭಾವಕ್ಕೆ ಒಂದು ಅವ್ಯಾಜ ಮನೋಹರತೆ ಬರುವದು.

೩೯. ಒಂದು ಕನಸನ್ನು ಕುರಿತು: ಕಾಮದ ಕಣ್ಣಿಗೆ ಪ್ರೇಮದ ಮೂರ್ತಿ ಸ್ಪಷ್ಟ ಗೋಚರವಾಗುವದಿಲ್ಲ.

೪೦. ಅಪತ್ಯಗಳನ್ನು ಕಳೆದುಕೊಂಡ ಸತಿಯೊಬ್ಬಳು ಆಸನ್ನಮರಣ ಶಿಶುವನ್ನು ನೋಡಲು ಬಂದ ಪತಿಯನ್ನು ಕುರಿತು ಅನಿರ್ವಚನೀಯ ದುಃಖದಿಂದ ಅರ್ಥಪೂರ್ಣವಾಗಿ ನೋಡಿದಾಗ ಅವನ ಎದೆಯಲ್ಲಿ ಹುಟ್ಟಿದ ಹಾಡು.

೪೧. ಮುಗದದ ವನವಾಸವನ್ನು ನೆನಿಸಿದಾಗ ಬಂದ ಒಂದು ಹಾಡು. ಒಂದು ನಾಟ್ಯಗೀತ.

೪೨. ಒಂದು ಅಪೂರ್ಣ ಪದ್ಯ. ಪ್ರೀತಿಯ ಪ್ರತಿಫಲ ಪ್ರೀತಿಯಲ್ಲಿಯೇ ಇದೆ. ಈ ಅನಂತ ಶಕ್ತಿಯಲ್ಲಿ ಅಷ್ಟು ಇಷ್ಟು ಎಂಬ ಸಾಂತ ಜಗತ್ತಿನ ಭೇದಗಳಿಗೆ ಅರ್ಥವಿಲ್ಲ.

೪೩. ಫಾಲ್ಗುಣ ಪೂರ್ಣಿಮೆಯ ಸುಮಾರು ಗಂಗೋಘದಲ್ಲಿ ದೀಪ ತೇಲಿಬಿಟ್ಟು ಅದು ತೇಲುವದೋ ಮುಣುಗುವದೋ ಎಂದು ಸಭಯ ಆಶೆಯಿಂದ ನಿರೀಕ್ಷಿಸುವ ದಂಪತಿಗಳಿಗೆ ಸಂಸಾರಪ್ರವಾಹದಲ್ಲಿ ಪ್ರೇಮದೀಪದ ಗತಿಯೂ ಹೀಗೇ ಎಂದು ಒಮ್ಮೊಮ್ಮೆ ಹೊಳೆಯುವದುಂಟು. ಕಾಶೀಯಾತ್ರೆಯಲ್ಲಿ ಬರೆದ ಪದ್ಯ.

೪೪. ಪತಿಗೆ ದೇಹಾದಿಯಾಗಿ ಸರ್ವಾರ್ಪಣ ಮಾಡಿದ ಸತಿ, ಸತಿಯಲ್ಲಿ ಮನಃಪೂರ್ವಕವಾಗಿ ಆಸಕ್ತನಾದ ಪತಿ ಇವರ ಭಾವ ಸಂಶುದ್ಧಿಯಾಗದೆ ಪ್ರೇಮದ ಜಗತ್ತು ಪ್ರಕಟವಾಗುವದಿಲ್ಲ. ಅಲ್ಲಿಯವರೆಗಾಗುವ ಸಂಸಾರ ಸಂಗ್ರಾಮಗಳು ಕುರುಕ್ಷೇತ್ರಕ್ಕಿಂತಲೂ ದುರಂತ. ಸಂವಾದಕ್ಕಿಂತಲೂ ವಾದದ ಹಾದಿಯನ್ನು ಹಿಡಿದ ದಂಪತಿಗಳ ಗತಿಯಂತೂ ಹೇಳತೀರದು. ಸಮಗ್ರ ಸಾಮರಸ್ಯ ಇಲ್ಲಿ ಹುಟ್ಟದಿದ್ದರೆ ಇನ್ನು ಎಲ್ಲಿ ಹುಟ್ಟಬೇಕು?

೪೫. ಅನಾಥಳಾದೆನೆಂದು ಆಗತಿಕಳಾಗಿ ಕೂಗುವ ಒಂದು ಹೆಣ್ಣು ಧ್ವನಿ ನಿನದಿಸುವವರೆಗೂ ಭೂಮಿಯಲ್ಲಿ ಶಾಂತಿಗೆ ಸ್ಥೈರ್ಯವಿಲ್ಲ. ದೇಶ ದೇಶಗಳ ಪಾರತಂತ್ರ್ಯಕ್ಕೂ ಹೆಣ್ಣಿನ ಆಗತಿಕತೆಗೂ ಸ್ವಾತಂತ್ರ್ಯ ಸಂಗ್ರಾಮಗಳಿಗೂ ನಿಕಟ ಸಂಬಂಧವಿದೆ. ತಾಯಿಯೇ ಶಾಂತಿಯುಗದ ಪ್ರಥಮ ಮನು.

೪೬. ಇಲ್ಲಿಯ ಉತ್ಪ್ರೇಕ್ಷಾಮಾಲೆಯಿಂದ ಬೆಳುದಿಂಗಳ ಮಾಯೆಯ ಅಮೋಘ ಪರಿಣಾಮವನ್ನು ವರ್ಣಿಸಿದ್ದಾಗಿದೆ.

೪೭. ಒಂದು ಅಪೂರ್ಣ ಪದ್ಯ. ಜನ್ಮ ಕೊಟ್ಟ ತಾಯಿ ಹೆಚ್ಚಿನವಳು. ಆದರೆ ಅವಳಿಗಿಂತ ಅವಳ ಹೃದಯದ ಮಾತು ಅದಕ್ಕೂ ಹಿರಿದಾದ ಒಂದು ಜನ್ಮವನ್ನು ನಮಗೆ ಕೊಡುತ್ತದೆ. ಅದೇ ದ್ವಿಜತ್ವದ ದೀಕ್ಷೆ.

೪೮. ಅನುಭವದ ಸ್ಫುರಣರೂಪವಾಗಿ ಹುಟ್ಟಿ ಶಬ್ದದಲ್ಲಿ ಮೈಗೊಂಡ ಭಾವವು ಆಕಾಶ ಪಾತಾಳವನ್ನು ವ್ಯಾಪಿಸಿ ಜೀವಜಾತಗಳಲ್ಲಿ ನವಪರಿವರ್ತನದ ಅಪೂರ್ವ ಲಹರಿಗಳನ್ನು ಹೇಗೆ ಎಬ್ಬಿಸುವದು ಎಂಬುದನ್ನು ಹೇಳಲಾಗಿದೆ.

೪೯. ಭಾರತಮಾತೆಯ ಪೂರ್ವ-ಪಶ್ಚಿಮ ಘಟ್ಟಗಳ ತೊಟ್ಟಿಲಲ್ಲಿ ಮಲಗಿದ ಕನ್ನಡ ಕಂದವ್ವನನ್ನು ತೂಗುವಾಗ ಹೇಳಿದ ಪದ.

೫೦. ಇಂಥ ಒಂದು ಭಾವಗೀತ ತನ್ನಿಂದ ತಾನೇ ಹುಟ್ಟಿ, ತಾನೆ ಬೆಳೆದು, ತನ್ನ ಹಿಗ್ಗಿನಿಂದಲೇ ಎಲ್ಲವನ್ನು ಹಿಗ್ಗಿಸಿ ಪರಾರ್ಥವನ್ನು ಅಪೇಕ್ಷಿಸದೆ ಆತ್ಮ ತೃಪ್ತಿಯನ್ನು ಕಾಣುವ ಆದರ ಭೃಂಗ ಮಾರ್ಗವನ್ನು ಇಲ್ಲಿ ಪ್ರಕಾಶಿಸಲಾಗಿದೆ.

